# ವಾನಸಿ

ತಿಂಗಳ ಪತ್ರಿಕೆ

ಮೇ : 1998

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 13 ಸಂಚಿಕೆ : 4

ಮೇ : 1998



**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.

ಚಂಪಾವತಿ ಎಚ್. ಎಸ್., ಸರಸ್ವತಿ ದು.

ಸವಿತ ಎ., ಗಾಯತ್ರಿ ವಿ., ಗೀತಾ,

ಬಿ. ಎನ್. ಮಧುಮತಿ, ಶಾರದ

**ಸಲಹೆ - ಸಹಕಾರ :**

ಇಳಾ ವಿಜಯಾ

**ಸಹ ಸಂಪಾದಕರು :**

ವನಜಾ ವೆಂ.

ನೀಲಾಂಜನ



ವಿಳಾಸ :

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067

ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**



*ಮೈಸೂರಿನಲ್ಲಿರುವ ಓದುಗರು*

**"ಮಾನಸ"**

*ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ*

**ವೆಂ. ವನಜ**

ಎಲ್. 3, ಏಳನೇ ತಿರುವು, ವಿ.ವಿ. ವಸತಿ ಗೃಹ

ಮಾನಸ ಗಂಗೋತ್ರಿ, ಮೈಸೂರು - 570 006


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಪರಿಸರ ಮಾಲಿನ್ಯದ ವಿರುದ್ಧ ನಡೆಯುತ್ತಿರುವ ಚಳುವಳಿಗಳು ಇಂದು ಕಾರ್ಮಿಕರನ್ನು ಬಲಿ ತೆಗೆದುಕೊಳ್ಳುತ್ತಿರುವುದು ದುರಂತವೇ ಸರಿ. ಪರಿಸರ ವರ್ಸಸ್ ಕಾರ್ಮಿಕರು ಎಂಬ ರೀತಿಯಲ್ಲಿ ಅಸಂಘಟಿತ ಕ್ಷೇತ್ರದಲ್ಲಿ ದೆಹಲಿಯ ಸುತ್ತಮುತ್ತ ಕಾರ್ಖಾನೆಗಳಲ್ಲಿ ನಡೆದುದನ್ನು ನಾವು ಗಮನಿಸಬಹುದಾಗಿದೆ. ಪರಿಸರದ ಹೆಸರಿನಲ್ಲಿ ಕಾರ್ಖಾನೆಗಳು ಮುಚ್ಚಲ್ಪಟ್ಟಾಗ ಇಡಿಯ ಸಂಸಾರದ ಭಾರದ ಜೊತೆ ಆರ್ಥಿಕ ಭಾರವನ್ನೂ ಹೊರ ಬೇಕಾಗುವುದರಿಂದ ಮಹಿಳೆಯರ ಬದುಕು ಅಸಹನೀಯವಾಗುತ್ತಾ ಹೋಗುತ್ತಿರುವುದನ್ನು ನಾವು ಕಾಣುತ್ತೇವೆ.

ಈ ಸಂದರ್ಭದಲ್ಲಿ ಬಿ.ಜೆ.ಪಿ. ಸರ್ಕಾರ ಪೋಕ್ರಾನ್ II ಪರೀಕ್ಷೆಯನ್ನು ರಾಷ್ಟ್ರೀಯ ಭದ್ರತೆಯ ಹೆಸರಿನಲ್ಲಿ ಸಮರ್ಥಿಸಿಕೊಂಡಿದೆ. ಭಾರತೀಯ ಸಂಸ್ಕೃತಿಯ ವಕ್ತಾರರಾಗಿರುವ ಇವರು ಅಶಾಂತಿ, ಅಸಹನೆ, ಅಸಹಿಷ್ಣುತೆ, ಅಧಿಕಾರ, ಶೂರತ್ವಗಳಿಗೆ ನಾಂದಿ ಹಾಡುವ ಬಾಂಬಿನ ಸಂಸ್ಕೃತಿಗೆ ಪ್ರಾಮುಖ್ಯತೆ ನೀಡುತ್ತಿರುವುದು ಅತ್ಯಂತ ವಿಡಂಬನಕಾರಿ ಸಂಗತಿಯಾಗಿದೆ. ಕಾರ್ಖಾನೆ ಮುಚ್ಚಲಿ, ಯುದ್ಧವಾಗಲಿ, ಕಾಡು ನಾಶವಾಗಲಿ - ಈ ಎಲ್ಲಾ ಸಂದರ್ಭದಲ್ಲೂ ಕೂಡಾ ದುಸ್ಥಿತಿಗೆ ತಳ್ಳಲ್ಪಡುವವಳು ಹೆಂಗಸೇ, ಇಂತಹ ಚಾರಿತ್ರಿಕ ತಪ್ಪಿನ ಉದಾಹರಣೆಗಳು ನಮಗೆ ಪ್ಯಾಲೆಸ್ಟೈನ್‌ನಲ್ಲಿ ಸಿಕ್ಕಬಹುದು, ಅಮೇರಿಕಾದಲ್ಲಿ ಸಿಕ್ಕಬಹುದು ಅಥವಾ ಭಾರತದಲ್ಲಿಯೇ ಸಿಕ್ಕಬಹುದು.

ಪರಿಸರದ ಹೆಸರಿನಲ್ಲಿ ಬಡ ಕಾರ್ಮಿಕರ ಕುಟುಂಬದ ಹೊಟ್ಟೆಯ ಮೇಲೆ ಹೊಡೆಯುವ ಸರ್ಕಾರ ಇಂದು ಬಾಂಬಿನ ಮೊರೆ ಹೋಗಿ ಇಡೀ ಜಗತ್ತಿನ ಪರಿಸರ ನಾಶಕ್ಕೆ ಹಾದಿ ತೋರಿಸುತ್ತಿರುವುದನ್ನು ಪರಿಸರವಾದಿಗಳು ತೀವ್ರವಾಗಿ ಖಂಡಿಸಬೇಕಾಗುತ್ತದೆ. ಹಿಂಸಾತ್ಮಕ ರಾಷ್ಟ್ರೀಯತೆಯಿಂದ ನಮ್ಮ ನೀರು, ವಿದ್ಯುಚ್ಛಕ್ತಿ, ನಿರುದ್ಯೋಗದಂತಹ ಸಮಸ್ಯೆಗಳು ಬಗೆ ಹರಿಯುವುದಿಲ್ಲ. ಅಧಿಕಾರದ ಭ್ರಮೆಯಲ್ಲಿ ನಾವು ಭಯ ಭೀತಿಯ ವಾತಾವರಣ ಹುಟ್ಟು ಹಾಕುತ್ತಿದ್ದೇವೆ. ಬದುಕನ್ನು ಸಹನೀಯವಾಗಿಸುವ ಸಮಸ್ಯೆಗಳತ್ತ ದೃಷ್ಟಿ ಹರಿಸದೆ, ಮಿಲಿಟರಿಗೆ ಹೆಚ್ಚು ಖರ್ಚು ಮಾಡುತ್ತಿರುವ ಸರ್ಕಾರದ ಧೋರಣೆ ಖಂಡನೀಯ. ಪರಿಸರದ ನಾಶವಾಗಲೀ, ಕಾರ್ಖಾನೆ ಮುಚ್ಚಲಿ, ಅಥವಾ ಯುದ್ಧವಾಗಲೀ ಇದರ ಬಡಪಟ್ಟಿಗೆ ಸಿಗುವವರು ಹೆಂಗಸರೇ ಎಂಬುದು ಸತ್ಯ.

ಜನ ಸಾಮಾನ್ಯರ ಅಗತ್ಯಗಳಿಗೆ ಕಿವಿಗೊಡದ ಬಿ.ಜೆ.ಪಿ. ಸರ್ಕಾರ ತನ್ನ ಬೆಂಬಲವನ್ನು ಹೆಚ್ಚಿಸಿಕೊಳ್ಳಲು ಜನಪ್ರಿಯ ಹುನ್ನಾರಗಳನ್ನು ಕೈಗೊಂಡಿದೆ. ತನ್ನ ಈಗಿನ ಸ್ಥಾನದಿಂದ ಅತಿ ಹೆಚ್ಚಿನ ರಾಜಕೀಯ ಮೈಲಿಗಲ್ಲನ್ನು ಸಾಧಿಸುವುದು ಅದರ ಉದ್ದೇಶವಾಗಿದೆ. ಬಜೆಪಿಗೆ ಮಧ್ಯಮ ವರ್ಗದವರಿಗಾಗಿ ಒಂದು ರಾಷ್ಟ್ರೀಯ ಐಡೆಂಟಿಟಿಯನ್ನು ಹುಟ್ಟು ಹಾಕುವುದು ಮುಖ್ಯವಾಗಿದೆ. ಅವರು ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿನ ಶೂನ್ಯತೆಯ ಪೂರ್ಣ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ. ಈ ಅಪಾಯವನ್ನು ಎದುರಿಸುವುದೆ ನಮಗಿರುವ ಸವಾಲು. ಈ ಹಿನ್ನೆಲೆಯಲ್ಲಿ ಸರ್ಕಾರದ ಧೋರಣೆಯನ್ನು ನಾವು ತೀವ್ರವಾಗಿ ಖಂಡಿಸಬೇಕು.

●

**ಮಾನಸ ಓದುಗರಿಗೆ ಕಾರ್ಮಿಕ ದಿನಾಚರಣೆಯ ಶುಭಾಶಯಗಳು**

# ಮಹಿಳಾ ಸಮಖ್ಯದ ಕಾರ್ಮಿಕ ಸಂಘಟನೆ

ರಾಷ್ಟ್ರೀಯ ಶಿಕ್ಷಣ ಯೋಜನಾನ್ವಯ 'ಮಹಿಳಾ ಸಮಖ್ಯ' ಮಹಿಳೆಯರಲ್ಲಿ ಸ್ವ-ಶಕ್ತಿ ಹಾಗೂ ಸಮಾನತೆಯನ್ನು ಹುಟ್ಟು ಹಾಕಲು 1986ರಲ್ಲಿ ಅಸ್ತಿತ್ವಕ್ಕೆ ಬಂದಿತು. ಮಹಿಳೆಯರಿಗೆ ಜ್ಞಾನ ದಕ್ಕುವಂತಹ ಪರಿಸರ ಹುಟ್ಟು ಹಾಕಿ ಇದರಿಂದ ಮಹಿಳೆಯರು ತಮ್ಮ ಅಭಿವೃದ್ಧಿಯಲ್ಲಿ ಸ್ವಷ್ಟಾತ್ಮಕ ಪಾತ್ರ ನಿರ್ವಹಿಸುವಂತೆ ಮಾಡಬೇಕೆಂಬುದು 'ಮಹಿಳಾ ಸಮಖ್ಯ'ದ ಮುಖ್ಯ ಉದ್ದೇಶವಾಗಿತ್ತು. ಹಳ್ಳಿಗಾಡು ಹೆಂಗಸರ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳಲು, ಅವರ ಅಭಿವೃದ್ಧಿಗೆ ಶ್ರಮಿಸಲು ಮಹಿಳಾ ಕಲೆಕ್ಟೀವ್ ಅಥವಾ ಸಂಘಗಳನ್ನು ಒತ್ತಡ ತರುವ ಗುಂಪುಗಳನ್ನಾಗಿ ಬಳಸಿಕೊಂಡು ಮಹಿಳಾ ಸಮಖ್ಯ ತನ್ನ ಗುರಿ ಸಾಧಿಸಲು ಪ್ರಯತ್ನಿಸಿತು. ಈ ಸಂಘಗಳ ಅನೇಕ ಚಟುವಟಿಕೆಗಳಿಂದ ಮಹಿಳೆಯರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಲಾಯಿತು.

ಇಂದು 5 ಜಿಲ್ಲೆಯ ಸುಮಾರು 1000 ಹಳ್ಳಿಗಳಲ್ಲಿ ಮಹಿಳಾ ಸಮಖ್ಯ ಕೆಲಸ ಮಾಡ ತೊಡಗಿದೆ. ಆದರೆ ಕಾಲಾಂತರದಲ್ಲಿ 'ಕಲೆಕ್ಟೀವ್' ಕಲ್ಪನೆ ನಾಶವಾಗಿ ಶ್ರೇಣೀಕೃತ ವ್ಯವಸ್ಥೆ ಮಹಿಳಾ ಸಮಖ್ಯದಲ್ಲಿ ಮುಖ್ಯವಾಗಿ ಕಂಡು ಬರತೊಡಗಿದೆ. ದಂತ ಗೋಪುರದ ಕನ್‌ಸಲ್‌ಟೆನ್ಸಿ ಹಾಗೂ ಇನ್‌ಪುಟ್‌ನ ಹೆಸರಿನಲ್ಲಿ ಇಂದು ನೂರಾರು ಕಾರ್ಯಕರ್ತೆಯರ, ಹಳ್ಳಿ ಹೆಂಗಸರ ಶ್ರೀಮಂತ ಅನುಭವಗಳು ಹಾಳಾಗಿ ಹೋಗುತ್ತಿವೆ. ಅಂದರೆ ಮಹಿಳಾ ಸಮಖ್ಯ ತನ್ನ ಮೂಲ ಉದ್ದೇಶಗಳಿಂದ ದೂರ ಸರಿಯತೊಡಗಿದೆ. ಮಹಿಳಾ ಸಮಖ್ಯ ತನ್ನ ಕೆಲಸಗಾರರ ಬಗ್ಗೆ ಹೊಂದಿರುವ ಧೋರಣೆಯನ್ನು ಗಮನಿಸಿದಾಗ ಇದರ ಅವನತಿಯನ್ನು ಗಮನಿಸಬಹುದಾಗಿದೆ. ಮಹಿಳಾ ಸಮಖ್ಯ ಕಾರ್ಯಕ್ರಮದ ಬೆನ್ನೆಲುಬೆಂದು ಪರಿಗಣಿತರಾದ ಸಹಯೋಗಿನಿಯರು ಸ್ವಯಂ ಸೇವೆಯ ಹೆಸರಿನಲ್ಲಿ ಅತ್ಯಂತ ಹೆಚ್ಚಿನ ರೀತಿಯ ಶೋಷಣೆಗೆ ಒಳಗಾಗುತ್ತಿದ್ದಾರೆ.

ಈ ಎಲ್ಲ ಹಿನ್ನಲೆಯಲ್ಲಿ 1994ರಲ್ಲಿ ಮಹಿಳಾ ಸಮಖ್ಯ ಒಂದು ಟ್ರೇಡ್ ಯೂನಿಯನ್ ಆಗಿ ರೆಜಿಸ್ಟರ್ ಆಯಿತು. ಮಹಿಳಾ ಸಮಖ್ಯದಲ್ಲಿ ಪ್ರಾರಂಭದ ದಿನಗಳಿಂದ ಕೆಲಸ ಮಾಡಿದವರು, ಸಂಘಟನೆಯೊಂದಿಗೆ ಬೆಳೆದವರು, ಈ ಸಂಘಟನೆ ಕಟ್ಟುವಾಗ ಅದರ ಸಂತೋಷ, ನೋವು, ಸವಾಲುಗಳನ್ನು ಎದುರಿಸಿದ ಮಹಿಳಾ ಸಮಖ್ಯದ ಮಹಿಳೆಯರು ಈ ಟ್ರೇಡ್ ಯೂನಿಯನ್ ಸ್ಥಾಪಿಸಿದರು. ಮಹಿಳಾ ಸಮಖ್ಯದ ಮೂಲ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಈ ಯೂನಿಯನ್ ಸ್ಥಾಪಿಸುವ ಅವಶ್ಯಕತೆಯನ್ನು ಇವರು ಕಂಡುಕೊಂಡರು.

ಇಂದು ಕವಲು ದಾರಿಯಲ್ಲಿ ನಿಂತಿರುವ ಮಹಿಳಾ ಸಮಖ್ಯ ಅನೇಕ ಶಕ್ತಿಗಳ ಜೊತೆಗೆ ಹಲವಾರು ಮಿತಿಗಳನ್ನು ಹೊಂದಿದೆ. ಕೆಲಸದ ಇನ್ನೊಂದು ಹಂತಕ್ಕೆ ಕಾಲಿಡುವಾಗಲೂ ಮಹಿಳಾ ಸಮಖ್ಯ ಕಲೆಕ್ಟೀವ್ ಹಾಗೂ ಮುಕ್ತವಾಗಿ ತೊಡಗಿಸಿಕೊಳ್ಳುವ ಚಿಂತನೆ ನಡೆಸುವ ಅಗತ್ಯವಿದೆಯೆಂದು ಟ್ರೇಡ್ ಯೂನಿಯನ್ ಭಾವಿಸುತ್ತದೆ. ಜೊತೆಗೆ ಯಾವುದೇ ರೀತಿಯ ಕೆಲಸದ ಬಗ್ಗೆಗಿನ ಚಿಂತನೆ, ಯೋಜನೆ ವಿವರಣೆಯಲ್ಲಿ, ಮಹಿಳಾ ಸಮಖ್ಯದ ಎಲ್ಲಾ ಕೆಲಸಗಾರರನ್ನು ಒಳಗೊಳ್ಳುವ ಅಗತ್ಯವಿದೆ. ಅಂದರೆ ಸಹಯೋಗಿನಿಯರು, ಸಹಾಯಕಿಯರು ಹಾಗೂ ಸಂಘಟನೆಯ ಬೆನ್ನೆಲುಬಾಗಿರುವ ಸಂಘದ ಮಹಿಳೆಯರನ್ನು ಒಳಗೊಂಡೇ ಹೆಚ್ಚು ಸಕ್ರಿಯವಾಗಿ ಮೇಲ್ಕಂಡ ಎಲ್ಲವೂ ನಡೆಯಬೇಕಾಗುತ್ತದೆ. ಈ ಮೂಲಕ ಹಳ್ಳಿಯಲ್ಲಿರುವ ಮಹಿಳೆಯರ ಹಾಗೂ ಸಮಖ್ಯದ ಮಧ್ಯೆ ಒಂದು ಜೀವಂತ ಕೊಂಡಿಯನ್ನು ಹೆಣೆಯಬೇಕಾಗುತ್ತದೆ. ಜೊತೆಗೆ ಕ್ಷೇತ್ರಗಳಲ್ಲಿ ದುಡಿಯುವ ಮಹಿಳೆಯರ ಅನುಭವಗಳನ್ನು ಮೌಲ್ಯಯುತವಾಗಿ ಗಣನೆಗೆ ತೆಗೆದುಕೊಂಡು ಕೆಲಸಗಳನ್ನು ಮುಂದುವರಿಸದಿದ್ದರೆ ಮಹಿಳಾ ಸಮಖ್ಯ ತನ್ನ ಮೂಲ ಉದ್ದೇಶಗಳನ್ನು ಕಳೆದುಕೊಂಡುಬಿಡುತ್ತದೆ ಎಂದು ಟ್ರೇಡ್ ಯೂನಿಯನ್ ಭಾವಿಸುತ್ತದೆ.

ಮಹಿಳಾ ಸಮಖ್ಯದ ಒಳಗೇ ಕಾಲಾಂತರದಲ್ಲಿ ಅಲ್ಲಿಯ ಕೆಲಸಗಾರರನ್ನು ಅಶಕ್ತರನ್ನಾಗಿಸುವ ಹಂತ ಬೆಳೆಯತೊಡಗಿದೆ. ಕ್ಷೇತ್ರ ಹಾಗೂ ಆಫೀಸ್‌ಗಳಲ್ಲಿ ಕೆಲಸ ಮಾಡುವ ಕೆಲಸಗಾರರ ಅನುಭವವನ್ನು ಗಣನೆಗೆ ತೆಗೆದುಕೊಳ್ಳದ ಮಹಿಳಾ ಸಮಖ್ಯದಲ್ಲಿ ಇವರ ಕೊಡುಗೆಯನ್ನು ನಿರ್ಲಕ್ಷಿಸಿ ವ್ಯಾಖ್ಯಾನಗಳು ಹಾಗೂ ಕಾರ್ಯಗಳು ಜರುಗತೊಡಗಿವೆ.

ಈ ವಿಚಾರವು ಸಹಯೋಗಿನಿಯರ ಹಂತದಲ್ಲಿಯಂತೂ ಕಣ್ಣಿಗೆ ರಾಚುವಷ್ಟು ಸ್ಪಷ್ಟವಾಗಿ ಕಾಣುತ್ತದೆ. ಇವರ

ಕೊಡುಗೆಯನ್ನು ವ್ಯವಸ್ಥಿತವಾಗಿ ನಿರ್ಲಕ್ಷಿಸಲಾಗುತ್ತಿದೆ. ಸ್ವಯಂ ಸೇವೆಯ ಹೆಸರಿನಲ್ಲಿ ಇವರ ಶೋಷಣೆಯನ್ನು ವ್ಯವಸ್ಥಿತವಾಗಿ ಮಾಡಲಾಗುತ್ತಿದೆ. ಸಹಯೋಗಿನಿಯರು ಈ ಸ್ವಯಂ ಸೇವೆಯ ಹಣೆಪಟ್ಟಿ ತಮಗೆ ಬೇಡ ಎನ್ನುತ್ತಾರೆ. ಬದಲಾಗಿ ತಮ್ಮದು ಹೆಚ್ಚು ಘನವಾದ ಕೆಲಸ, ಬೆವರು ಸುರಿಸುವ ಕಾರ್ಮಿಕರಿಗೆ ಸಮಾನವಾದುದು. ಆದರೆ ಈ ಕೆಲಸಕ್ಕೆ ಕಾಲಾವಧಿಯ ನಿರ್ದಿಷ್ಟತೆಯೇ ಇಲ್ಲ. ಪ್ರವಾಸದ ವೇಳೆ, ಮನೆಯಿಂದ ಆಚೆ ಇರಬೇಕಾದ ದಿನಗಳನ್ನು ಲೆಕ್ಕಕ್ಕೇ ತೆಗೆದುಕೊಳ್ಳುವುದಿಲ್ಲ. ಹಾಗಾಗಿ ಈ ಕೆಲಸಕ್ಕೆ ಅಧಿಕಾರಿ ವರ್ಗದವರು ತಮಗೆ ಅನುಕೂಲವಾಗುವ ಹಾಗೆ ಸ್ವಯಂ ಸೇವೆಯ ಪಟ್ಟವನ್ನು ಕಟ್ಟುತ್ತಾರೆ. ಇದನ್ನು ಸಹಯೋಗಿನಿಯರು ಹಾಗೂ ಒಟ್ಟಾಗಿ ಟ್ರೇಡ್ ಯೂನಿಯನ್ ತಿರಸ್ಕರಿಸುತ್ತದೆ. ಕಾರ್ಮಿಕ ವಲಯದೊಳಕ್ಕೆ, ನಿಯಮಗಳೊಳಕ್ಕೆ ಸಹಯೋಗಿನಿಯರನ್ನು ತರದಿರುವುದಕ್ಕಾಗಿ ಇವರನ್ನು ಸ್ವಯಂ ಸೇವಕರು ಎಂಬ ರೀತಿಯಲ್ಲಿ ಪರಿಗಣಿಸಲಾಗುತ್ತದೆ ಎಂದು ಟ್ರೇಡ್ ಯೂನಿಯರ್ಯ ಭಾವಿಸುತ್ತದೆ.

ಮಹಿಳಾ ಸಮಖ್ಯದ ಕಾರ್ಯಕ್ರಮಗಳು ರೂಪಿಸುವ ವಿವಿಧ ಹಂತಗಳಲ್ಲಿ ಕೇಂದ್ರ ಹಾಗೂ ಜಿಲ್ಲಾ ಮಟ್ಟದಲ್ಲಿ ದುಡಿಯುವ ಎಲ್ಲಾ ಮಹಿಳೆಯರ ಕೊಡುಗೆ ಅರ್ಥಪೂರ್ಣವಾದುದು. ಮಹಿಳಾ ಸಮಖ್ಯದ ವರದಿಗಳ ಕ್ರೋಢೀಕರಣದಲ್ಲಿಯಾಗಬಹುದು, ಹೆಚ್ಚು ರೀತಿಯಲ್ಲಿ ನೀಡಿರುವ ಮಾಹಿತಿಯಲ್ಲಾಗಿರಬಹುದು, ಓದಿನ ಹಂತಕ್ಕಾಗಿ ಸಂಗ್ರಹಿಸಿದ ಸರಕಿನಲ್ಲಾಗಲೀ ಅಥವಾ ಎಲ್ಲಾ ಕಾರ್ಯಕ್ರಮಗಳಿಗೆ ನೀಡುವ ಆಡಳಿತ ರೀತಿಯ ಬೆಂಬಲದಲ್ಲಾಗಲೀ ದುಡಿಯುತ್ತಿರುವ ಎಲ್ಲಾ ಮಹಿಳೆಯರ ಕೊಡುಗೆ ಅಮೂಲ್ಯವಾದುದು. ಆದರೆ ಇವು ಯಾವ ಹಂತದಲ್ಲಿಯೂ ಗಣನೆಗೇ ಬರುವುದಿಲ್ಲ. ಹಾಗಾಗಿ ತಾವು ಮಾಡುವ ಕೆಲಸ ಸರಿಯಾಗಿ ಗುರುತಿಸಲ್ಪಡಬೇಕು, ವೈಜ್ಞಾನಿಕವಾಗಿ ಮೌಲೀಕರಣಗೊಳ್ಳಬೇಕು ಹಾಗೂ ಅದಕ್ಕೆ ತಕ್ಕನಾಗಿ ಸಂಬಳ/ಸವಲತ್ತು ನೀಡಬೇಕೆಂಬುದು ಮಹಿಳಾ ಸಮಖ್ಯ ಟ್ರೇಡ್ ಯೂನಿರ್ಯ ಸದಸ್ಯರ ಬೇಡಿಕೆಯಾಗಿದೆ. ಇದರಿಂದ ಘನತೆಯುಳ್ಳ ಹಾಗೂ ಸಶಕ್ತ ರೀತಿಯ ಬದುಕನ್ನು ತಾವು ನಡೆಸಬಹುದಾಗಿದೆ ಎಂದು ಇವರು ಭಾವಿಸುತ್ತಾರೆ.

ಮಹಿಳಾ ಸಮಖ್ಯದ ಭವಿಷ್ಯವನ್ನು ರೂಪಿಸುವಲ್ಲಿ ತಮ್ಮ ಭಾಗವಹಿಸುವಿಕೆ ಪೂರ್ತಿಯಾಗಿ ಇರಬೇಕೆಂಬುದೂ ಸಹ ಇವರ ಬೇಡಿಕೆಯಾಗಿದೆ. ಸರಿಯಾದ ಸಂಬಳ ಸೌಲಭ್ಯ, ಉತ್ತಮ ಕೆಲಸದ ಸ್ಥಿತಿ, ಕೆಲಸದ ಭದ್ರತೆ ಹಾಗೂ ಗೌರವಾನ್ವಿತ ಅಸ್ತಿತ್ವ ಇವು ಇವರ ಬೇಡಿಕೆಗಳಾಗಿವೆ. ಮಹಿಳಾ ಸಮಖ್ಯವನ್ನು ಸಂಘಟನೆ ಎಂದೇ ಭಾವಿಸುವ ಇವರು ಅದರ ಉದ್ದೇಶ/ಗುರಿಗಳಿಗೆ ಬದ್ಧರಾಗಿರುವುದನ್ನು ಸ್ಪಷ್ಟಪಡಿಸುತ್ತಾರೆ. ತಮ್ಮ ಬೇಡಿಕೆಗಳನ್ನು ವ್ಯಕ್ತಪಡಿಸುವುದು ಹಾಗೂ ಸಂಘಟಿತ ಪ್ರಯತ್ನಗಳಿಂದ ಇವುಗಳನ್ನು ಪಡೆದುಕೊಳ್ಳಲು ಪ್ರಯತ್ನಿಸುವುದು - ಮಹಿಳಾ ಸಮಖ್ಯ ಹೊಂದಿದ ಮೂಲಭೂತ ಉದ್ದೇಶಗಳಿಗೆ ವಿರೋಧಾಭಾಸವಾಗಿ ಇಲ್ಲವೆಂದು ಇವರು ಸ್ಪಷ್ಟಪಡಿಸುತ್ತಾರೆ.

1. ಭವಿಷ್ಯದ ಯೋಜನೆ : ಪ್ರತಿ ವರ್ಷವೂ ಮಹಿಳಾ ಸಮಖ್ಯ ಕಾರ್ಯಕ್ರಮ ಹಾಗೂ ಕಾರ್ಯಕ್ರಮ ಯೋಜನೆಯನ್ನು ರೂಪಿಸುತ್ತದೆ. ಈ ದೆಸೆಯಲ್ಲಿಯೇ ಎಲ್ಲಾ ಕಾರ್ಯಕ್ರಮಗಳೂ ಜರುಗುತ್ತವೆ. ಆದರೆ ಯಾವ ಮಹಿಳೆಯರಿಗಾಗಿ ಈ ಕಾರ್ಯಕ್ರಮಗಳು ಯೋಜಿತವಾಗಿಯೋ ಅವರಿಗೆ ಇವು ಅಮುಖ್ಯವಾಗಿವೆ ಎಂದು ಸಹಯೋಗಿನಿಯರು ಭಾವಿಸುತ್ತಾರೆ. ಮಹಿಳಾ ಸಮಖ್ಯದ ಯೋಜನೆಗಳು, ಕಾರ್ಯಕ್ರಮಗಳು ಮಹಿಳಾ ಸಮಖ್ಯ ಹಾಗೂ ಗ್ರ್ಯಾಸ್ ರೂಟ್ ಮಧ್ಯ ಒಂದು ಅನಾಥ ಪ್ರಶ್ನೆ ಹುಟ್ಟು ಹಾಕುತ್ತಿವೆ ಎಂದು ಇವರು ಭಾವಿಸುತ್ತಾರೆ. ಈ ಅನಾಥ ಪ್ರಶ್ನೆಯನ್ನು ಹೋಗಲಾಡಿಸಲು ಮಹಿಳಾ ಸಮಖ್ಯ ಎರಡು ರೀತಿಯಾಗಿ ಪ್ರಯತ್ನಿಸಬೇಕು ಎಂಬ ಇವರ ಕಾರ್ಮಿಕ ಸಂಘಟನೆ ಸೂಚಿಸುತ್ತದೆ.

ಮೊದಲನೆಯದಾಗಿ ಎಲ್ಲಾ ಮೌಲ್ಯಮಾಪನ ವರದಿಗಳು - ಇತ್ತೀಚಿನದೂ ಕೂಡಾ ಅನುವಾದಿಸಲ್ಪಟ್ಟು ಎಲ್ಲಾ ಸ್ಟಾಫ್ ಸದಸ್ಯರಿಗೂ ಸಿಕ್ಕುವಂತಾಗಬೇಕು, ಎರಡನೆಯದಾಗಿ ಸಂಘದ ಮಹಿಳೆಯರು, ಸಹಯೋಗಿನಿಯರು ಮತ್ತು ಇತರ ಸ್ಟಾಫ್‌ನವರನ್ನು ಸೇರಿಸಿ ಒಂದು ವಿವರವಾದ ಚರ್ಚೆ, ಅಧ್ಯಯನ, ಎಕ್ಸರ್‌ಸೈಜ್ ಮಾಡಬೇಕು. ಶ್ರೇಣೀಕೃತ ದೃಷ್ಟಿಕೋನವನ್ನು ಬದಲಾಯಿಸಬೇಕು. ಗಂಭೀರವಾದ ಯೋಜನೆಗಳು ಹಾಗೂ ಮಹಿಳಾ ಸಮಖ್ಯದ ಗುರಿಗಳು ಮಹಿಳೆಯರ ಮಧ್ಯದಿಂದಲೇ ತೀರ್ಮಾನವಾಗಬೇಕು, ಮೂಡಿಬರಬೇಕು. ಸಂಘಗಳನ್ನು ಸ್ಥಾಪಿಸುವಾಗಲಂತೂ ಈ ರೀತಿಯ ಸಿದ್ಧತೆ ಬಹಳ ಅಗತ್ಯ.

**ಕ್ರಮಬದ್ಧಗೊಳಿಸುವುದು ; (Regularisation)**

ಮಹಿಳಾ ಸಮಖ್ಯದ ಸಹಯೋಗಿನಿಯರು, ಕಿರಿಯ ಹಾಗೂ ಹಿರಿಯ ಸಂಪನ್ಮೂಲ ವ್ಯಕ್ತಿಗಳು ಹಾಗೂ ಆಫೀಸಿನ ಸಿಬ್ಬಂದಿ ವರ್ಗದವರ ಕೆಲಸಗಳನ್ನು ತಕ್ಷಣವೇ ಖಾಯಂಗೊಳಿಸಬೇಕು. ಕ್ರಮಬದ್ಧ ಸಂಬಳ ಸವಲತ್ತು ಹೊಂದಿರುವ ಕೆಲಸಗಾರರಿಗೆ 1995ರ ಕೊನೆಯವರೆಗೆ ಅಥವಾ ಮಹಿಳಾ ಸಮಖ್ಯ ಕಾರ್ಯಕ್ರಮ ಅಸ್ತಿತ್ವದಲ್ಲಿರುವವರೆಗೆ - ಯಾವುದು ಹೆಚ್ಚಿನದೋ ಅಲ್ಲಿಯವರೆಗೆ

ಉದ್ಯೋಗ ಮುಂದುವರಿಯುವುದೆಂದು ಉದ್ಯೋಗದ ಆರ್ಡರ್‌ನಲ್ಲಿ ಹೇಳಲಾಗಿದೆ. ಈ ಸದಸ್ಯರು ಎಕ್ಸಿಕ್ಯೂಟೀವ್ ಕಮಿಟಿಯ ಒಪ್ಪಿಗೆಯಂತೆ ಕರ್ನಾಟಕ ಸರ್ಕಾರದ ನಿಯಮಗಳಿಗನ್ವಯವಾಗಿ ಸಂಬಳವನ್ನು ಪಡೆಯುತ್ತಿದ್ದಾರೆ. ಅವರ ಸ್ಥಿತಿ ಹಾಗೆಯೇ ಮುಂದುವರಿಯಬೇಕು ಎಂದು ಕಾರ್ಮಿಕ ಸಂಘಟನೆ ಹೇಳುತ್ತದೆ. ಅವರನ್ನು ತಾತ್ಕಾಲಿಕ ಅಥವಾ ಕಾಂಟ್ರ್ಯಾಕ್ಟ್ ಕೆಲಸಗಾರರನ್ನಾಗಿ ಮಾಡುವ ಯಾವುದೇ ಯೋಚನೆಯನ್ನು ತಕ್ಷಣವೇ ಕೈ ಬಿಡಬೇಕು. ಈ ಸದಸ್ಯರು 1989ರ ಕರ್ನಾಟಕ ಸರ್ಕಾರ ನಿಯಮಾನ್ವಯ ಸಂಬಳಗಳನ್ನೇ ಪಡೆಯುತ್ತಿದ್ದಾರೆ. 1994ರಲ್ಲಿ ಜಾರಿಗೆ ಬಂದ ಸಂಬಳದ ಬದಲಾವಣೆಗಳನ್ನು ಮಹಿಳಾ ಸಮಖ್ಯ ಜಾರಿಗೆ ತಂದಿಲ್ಲ. ಈ ಸಂಬಳದ ಮೊತ್ತ ಮಹಿಳಾ ಸಮಖ್ಯದ ಬಜೆಟ್ ದಾಟಿ ಹೋಗುತ್ತದೆ ಎಂಬ ಕಾರಣ ನೀಡಲಾಗುತ್ತದೆ. 1994ರ ನಿಯಮಾನ್ವಯ ಮಹಿಳಾ ಸಮಖ್ಯ ಸಂಬಳ ನೀಡಬೇಕಾಗುತ್ತದೆಯಲ್ಲದೇ ಈಗ ಹೆಚ್ಚಿಸಿರುವ 160% ಡಿ.ಎ.ಯನ್ನೂ ನೀಡಬೇಕು ಎಂಬ ಬೇಡಿಕೆಯನ್ನು ಕಾರ್ಮಿಕ ಸಂಘಟನೆಯವರು ಇತ್ತಿದ್ದಾರೆ.

**ಈ ಹಂತದಲ್ಲಿ ಇವರ ಬೇಡಿಕೆಗಳು ಹೀಗಿವೆ.**

1. ಈಗ ಖಾಯಂ ಆಗಿರುವ ಕೆಲಸಗಾರರ ಸ್ಥಿತಿ ಏನೂ ಬದಲಾವಣೆ ಇಲ್ಲದೇ ಹಾಗೆಯೇ ಮುಂದುವರಿಯಬೇಕು.

2. ಮಹಿಳಾ ಸಮಖ್ಯ ಈಗ ಮೂರನೆಯ ಹಂತದ ಕೆಲಸಕ್ಕೆ ಕಾಲಿಟ್ಟಿದೆ. ಒಂದು ಹಂತ ಹಾಗೂ ಇನ್ನೊಂದು ಹಂತದ ಮಧ್ಯದ ಮುಂದುವರಿಕೆಯನ್ನು ನಿರ್ವಹಿಸುವಲ್ಲಿ ಸದಸ್ಯರು ಸಫಲರಾಗಿದ್ದಾರೆ. ಇದೇ ರೀತಿ ಭವಿಷ್ಯದಲ್ಲಿಯೂ ಮುಂದುವರಿಯಬೇಕು ಹಾಗೂ ಮಹಿಳಾ ಸಮಖ್ಯದ ಅಧಿಕಾರಿಗಳು ಮುಂದಾಗಿಯೇ ಯೋಜನೆಗಳು ಹಾಗೂ ಕಾನ್‌ಟಿನ್‌ಜನ್ಸಿ ಪ್ರಾವಿಜನ್‌ಗಳ ಮೂಲಕ ಮಹಿಳಾ ಸಮಖ್ಯ ಪ್ರಾಜೆಕ್ಟ್ ಬಹಳ ದಿನ ಮುಂದುವರಿಯುವುದೆಂಬ ಆಶ್ವಾಸನೆ ನೀಡಬೇಕು ಮತ್ತು ಮಹಿಳಾ ಸಮಖ್ಯದ ಎಲ್ಲಾ ಸದಸ್ಯರ ಉದ್ಯೋಗ ಕೂಡಾ ಮುಂದುವರಿಯುವುದೆಂಬ ಆಶ್ವಾಸನೆ ನೀಡಬೇಕು ಎಂಬ ಬೇಡಿಕೆಯನ್ನು ಕಾರ್ಮಿಕ ಸಂಘಟನೆ ಮುಂದಿಡುತ್ತದೆ.

3. ಪ್ರಾವಿಡೆಂಟ್ ಫಂಡ್ ಹಾಗೂ ಗ್ರ್ಯಾಚುಯಿಟಿಯನ್ನು ರೆಟ್ರಾಸ್ಪೆಕ್ಟೀವ್ ಎಫೆಕ್ಟ್‌ನಿಂದ ಜಾರಿಗೆ ತರಬೇಕು.

4. ಪ್ರತಿ ಹಂತದ ಕೊನೆಗೆ ನಿಯಮಿಸುವ ಹೊಸ ಕಾಂಟ್ರ್ಯಾಕ್ಟನ್ನು ಈ ಕಾರ್ಮಿಕ ಸಂಘಟನೆ ತಿರಸ್ಕರಿಸುತ್ತದೆ.

**ಸಮಾನವಾಗಿರುವ ಸೇವಾಸ್ಥಿತಿಗಳು**

ಪ್ರಸ್ತುತ ಸದಸ್ಯರಲ್ಲಿ 4 ರೀತಿಯ ಸೇವಾ ಸ್ಥಿತಿಗಳಿವೆ.

1. ಕರ್ನಾಟಕ ಸರ್ಕಾರದ ನಿಯಮಗಳನ್ವಯ ಸಂಬಳ ತೆಗೆದುಕೊಳ್ಳುವ ಖಾಯಂ ಕೆಲಸಗಾರರು.

2. ಈ ನಿಯಮಗಳಂತೆಯೇ ಸಂಬಳ ಹೊಂದಿರುವ ಒಪ್ಪಂದ ಬದ್ಧ ಕೆಲಸಗಾರರು.

3. ಕನ್‌ಸಾಲಿಡೇಟೆಡ್ ಸಂಬಳ ಹೊಂದಿರುವ ಒಪ್ಪಂದ ಬದ್ಧ ಕೆಲಸಗಾರರು.

4. ಹೇಗೂ ವ್ಯಾಖ್ಯಾನಿಸಿರದ ಕನ್‌ಸಾಲಿಡೇಟೆಡ್ ಸಂಬಳ ಹೊಂದಿರುವವರು.

ಈ ರೀತಿಯ ತಾರತಮ್ಯವನ್ನು ನಿಷೇಧಿಸಬೇಕು ಎಂಬ ಕಾರ್ಮಿಕ ಸಂಘಟನೆಯ ಬೇಡಿಕೆ ಇದೆ. ಸಹಯೋಗಿನಿಯರು, ಹಿರಿಯ, ಕಿರಿಯ ಸಂಪನ್ಮೂಲ ವ್ಯಕ್ತಿಗಳನ್ನು, ಕಛೇರಿಯ ಕೆಲಸಗಾರರನ್ನು ಖಾಯಂ ಮಾಡಬೇಕು. ಕರ್ನಾಟಕ ಸರ್ಕಾರಿ ನಿಯಮಾನ್ವಯ ಇವರಿಗೆ ಸಂಬಳದ ಸವಲತ್ತು ನೀಡಬೇಕು. ಸಹಯೋಗಿನಿಯರ ಕೆಲಸ ಆರೋಗ್ಯ ಸಂಸ್ಥೆಯಲ್ಲಿ ಕೆಲಸ ಮಾಡುವ A.N.M.S.ರವರ ಕೆಲಸದ ರೀತಿಗೆ ಹತ್ತಿರವಾಗಿರುವುದರಿಂದ ಅವರಿಗೆ ನೀಡುವ ಸಂಬಳವನ್ನು ಇವರಿಗೂ ನೀಡಬೇಕು ಎಂಬುದು ಕಾರ್ಮಿಕ ಸಂಘಟನೆಯ ಬೇಡಿಕೆಯಾಗಿದೆ. ಇಂಡಿಯನ್ ಕಾರ್ಮಿಕ ಕಾನ್‌ಫರೆನ್ಸ್ 15ರ ಪ್ರಕಾರ ಅವಶ್ಯಕತೆಗೆ ಅನುಗುಣವಾಗಿರುವ ಸಂಬಳ ಹಾಗೂ ವೇಜ್‌ಕಾಸ್ಟನ ವಿವರಣೆಯನ್ನು ಕೂಡಾ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ಪ್ರಕಾರ ಸಹಯೋಗಿನಿಯರಿಗೆ 4,750ರೂ. ಸಂಬಳ ಸಿಗಬೇಕಾಗುತ್ತದೆ. ಇದಕ್ಕೂ ಕಡಿಮೆಯಾಗಿರುವ ಸರ್ಕಾರಿ ನಿಯಮಗಳ ಪ್ರಕಾರದ ಸಂಬಳದ ಬೇಡಿಕೆಯನ್ನು ಕಾರ್ಮಿಕರ ಸಂಘಟನೆ ಕೇಳುತ್ತದೆ. ಈ ಬೇಡಿಕೆ ನ್ಯಾಯಯುತವಾಗಿರುವುದರಿಂದ ಇದನ್ನು ಒಟ್ಟಾಗಿ ಜಾರಿಗೆ ತರಬೇಕೆಂದು ಕಾರ್ಮಿಕ ಸಂಘಟನೆ ಒತ್ತಾಯಿಸುತ್ತದೆ. ಕಿರಿಯ ಸಂಪನ್ಮೂಲ ವ್ಯಕ್ತಿಗಳಿಗೆ ಈಗಿನ ಕನ್‌ಸಾಲಿಡೇಟೆಡ್ ಸಂಬಳಕ್ಕೆ ಸಮಾನವಾಗುವಷ್ಟು ಸಂಬಳ ಕೇಳಲಾಗಿದೆ. ಇದರ ಜೊತೆಗೆ ಮನೆ ಬಾಡಿಗೆ, ಸಾರಿಗೆ ಭತ್ಯೆ, ಊಟದ ಭತ್ಯೆ ಇವುಗಳನ್ನು ಕೂಡಾ ನೀಡಬೇಕೆಂದು ಸಂಘಟನೆ ಒತ್ತಾಯಿಸುತ್ತದೆ.

**ಕೆಲಸದ ಸ್ಥಳದಲ್ಲಿ ರಕ್ಷಣೆ**

ವಿಶೇಷವಾಗಿ ಹಳ್ಳಿಗಾಡುಗಳಲ್ಲಿ ಕೆಲಸ ಮಾಡುವಾಗ ಮಹಿಳಾ ಸಮಖ್ಯ ಕೆಲಸಗಾರರು ದೈಹಿಕ ಹಿಂಸೆಗಳನ್ನು

ಎದುರಿಸುತ್ತಾರೆ. ಹಿಂದೆ ನಡೆದ ಇಂತಹ ಘಟನೆಗಳ ರೀತಿಯನ್ನು ಮರುಪರಿಶೀಲಿಸಿ ಹೆಚ್ಚು ರೀತಿಯ ರಕ್ಷಣೆ ನೀಡಬೇಕಾಗುತ್ತದೆ.

1. ಯಾವುದೇ ರೀತಿಯ ದೈಹಿಕ ಹಿಂಸೆ ನಡೆದಾಗ ತಕ್ಷಣ ಹಾಗೂ ಬಲವಾದ ಕ್ರಮವನ್ನು ತೆಗೆದುಕೊಳ್ಳಬೇಕಾಗುತ್ತದೆ. ಪೋಲೀಸ್ ತನಿಖೆ ನಡೆಸಬೇಕಾಗುತ್ತದೆ ಹಾಗೂ ಸಂಘಟನೆಯಿಂದ ಎಲ್ಲಾ ರೀತಿಯ ಒಗ್ಗಟ್ಟನ್ನು ತೋರಿಸಬೇಕಾಗುತ್ತದೆ.

2. ಕಾರ್ಮಿಕ ಸಂಘಟನೆಯೊಡನೆ ಸಮಾಲೋಚಿಸುವ ಮೂಲಕ ಸೂಕ್ತವಾದ ಪರಿಹಾರಗಳನ್ನು ನೀಡಬೇಕಾಗುತ್ತದೆ.

3. ನೊಂದಿರುವ ಮಹಿಳೆಯರ ಕೇಸುಗಳನ್ನು ಮರುಪರಿಶೀಲನೆ ಮಾಡಿ ಸೂಕ್ತವಾದ ಪರಿಹಾರವನ್ನು ನೀಡಬೇಕಾಗುತ್ತದೆ. ವೈಯಕ್ತಿಕ ಅಪಘಾತ ಇನ್‌ಸೂರೆನ್ಸ್ ಪಾಲಿಸಿಯನ್ನು GIC ಆಫ್ ಇಂಡಿಯಾದ 2 ಲಕ್ಷ ಹಣಕ್ಕೆ 24 ಘಂಟೆಗಲೂ ಕವರ್ ಆಗುವ ಹಾಗೆ ತೆಗೆದುಕೊಳ್ಳಬೇಕಾಗುತ್ತದೆ ಎಂದು ಸಂಘಟನೆಯ ಬೇಡಿಕೆ. ಕರ್ನಾಟಕ ಸರ್ಕಾರದ ನಿಯಮಾನ್ವಯ ಎಲ್ಲಾ ರಜೆಯ ಸೌಲಭ್ಯಗಳೂ ಇವರಿಗೆ ಸಿಗಬೇಕೆಂಬ ಬೇಡಿಕೆಯನ್ನು ಸಂಘಟನೆ ಮುಂದಿಡುತ್ತದೆ.

**ಕೆಲಸದ ಕಾಲಾವಧಿ**

ಪ್ರಸ್ತುತದಲ್ಲಿ ಕೆಲಸದ ವೇಳೆ ಅರಾಜಕತೆಯಿಂದ ಕೂಡಿದೆ. ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಯಾವುದೇ ರೀತಿಯ ವಿಶಾಂತವಾಗಲೀ ಅಥವಾ ವಿಶ್ರಾಂತಿಯಾಗಲೀ ಇಲ್ಲ. ರಜೆಯ ದಿನಗಳಲ್ಲೂ ಅವರು ಕೆಲಸಕ್ಕೆ ಸಿದ್ಧರಿರಬೇಕಾಗುತ್ತದೆ. ದಿನಕ್ಕೆ 8 ಘಂಟೆಗಳ ಕಾಲ ಹಾಗೂ ವಾರಕ್ಕೆ 48 ಘಂಟೆಗಳ ಕಾಲದ ಅವಧಿಯನ್ನು (ಎರಡನೇ ಶನಿವಾರದ ಹೊರತಾಗಿ) ಮಾಡಬೇಕೆಂಬುದು ಯೂನಿಯನ ಬೇಡಿಕೆಯಾಗಿದೆ. ಸಾರಿಗೆ ಅವಧಿಯನ್ನು ಇಲ್ಲಿ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ ಎಂದು ಯೂನಿಯನ್ ಒತ್ತಾಯಿಸುತ್ತದೆ. ಕೆಲಸವನ್ನು ಹೆಚ್ಚು ಸಮಯ ಮಾಡುವಂತಹ ಸಂದರ್ಭವೊದಗಿದರೆ ಹೆಚ್ಚು ಭತ್ಯೆ ಹಾಗೂ ಪರಿಹಾರ ರಜೆಯ ಸೌಲಭ್ಯವನ್ನು ಮಾಡಬೇಕು ಎಂಬುದೂ ಕೂಡಾ ಇವರ ಬೇಡಿಕೆಯಾಗಿದೆ. ಕೆಲಸ ಮಾಡಲು ಗುರುತಿಸಲ್ಪಡುವ ಹಳ್ಳಿಗಳು ಹತ್ತಿರದಲ್ಲಿಯೇ ಇರಬೇಕೆಂಬುದು ಇವರ ಇನ್ನೊಂದು ಬೇಡಿಕೆ.

**ಕೆಲಸದ ಯೋಜನೆ**

ಜಿಲ್ಲಾ ಕಾರ್ಯಕ್ರಮ ನಡೆಸುವ ಸದಸ್ಯರು ಕ್ರಮವಾಗಿ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಎಲ್ಲಾ ಸದಸ್ಯನಿಯರೊಂದಿಗೆ ಕುಳಿತು, ಚರ್ಚಿಸಿ ಎಲ್ಲರಿಗೂ ಒಪ್ಪಿಗೆಯಾಗುವ, ಎಲ್ಲರಿಂದಲೂ ರಚಿಸಲ್ಪಡುವ ಕಾರ್ಯಕ್ರಮಗಳ ಆಧಾರದ ಮೇಲೆ ಕೆಲಸದ ಯೋಜನೆಯನ್ನು ತಯಾರಿಸಬೇಕು. ಈ ಕೆಲಸದ ಯೋಜನೆ- ದೊರಕುವ ಸಮಯವನ್ನು ಕ್ಷೇತ್ರಕ್ಕೆ ಭೇಟಿ ನೀಡುವ, ಸಾರಿಗೆ ಸಮಯ, ಕಛೇರಿ ಕೆಲಸ, ವರದಿ, ಮರುವಿಮರ್ಶೆ, ಚರ್ಚೆ ಸಮನ್ವಯಿಸುವುದು ಇವೆಲ್ಲವನ್ನೂ ಚೆನ್ನಾಗಿ ಬಳಸುವಂತಹ ಕಾರ್ಯಕ್ರಮದ ಯೋಜನೆಯನ್ನು ರೂಪಿಸಬೇಕಾಗುತ್ತದೆ.

**ವರ್ಗಾವಣೆ**

ಮಹಿಳಾ ಸಮಖ್ಯದ ಕಾರ್ಯಕ್ರಮದ ಸಫಲತೆಗೆ ಸ್ಥಳೀಯ ಜ್ಞಾನದ, ಮಾಹಿತಿಯ ಅಗತ್ಯವಿರುವುದರಿಂದ ಸಹಯೋಗಿನಿಯರು ಸ್ಥಳೀಯರೇ ಆಗಿರಬೇಕಾಗುತ್ತದೆ. ಇದರಿಂದ ದಕ್ಕುವ ಸಮಯ ಹಾಗೂ ಸಂಪನ್ಮೂಲಗಳನ್ನು ಸರಿಯಾಗಿ ಬಳಸುವುದಕ್ಕೆ ಸಹಾಯವಾಗುತ್ತದೆ. ಆದ್ದರಿಂದ ಶಿಕ್ಷೆ ಕೊಡುವುದಕ್ಕೋಸ್ಕರ ವರ್ಗಾವಣೆ ಮಾಡಬಾರದು. ವರ್ಗಾವಣೆ ಕೋರಿಕೆ ಹಾಗೂ ಮದುವೆಯ ಹಿನ್ನಲೆಗಳಲ್ಲಿ ನಡೆಯಬೇಕಾಗುತ್ತದೆ.

**ತರಬೇತಿ ಹಾಗೂ ಅಭಿವೃದ್ಧಿ**

ಅಗತ್ಯವಿರುವ ತರಬೇತಿಯನ್ನು ಆಗಾಗ್ಗೆ ಎಲ್ಲಾ ಸ್ಟಾಫ್ ಸದಸ್ಯನಿಯರಿಗೂ ಕೊಡಬೇಕಾಗುತ್ತದೆ. ಜೊತೆಗೆ ಸೇರಿಸಿಕೊಂಡು ಕಾರ್ಯಕ್ರಮಗಳಿಗೆ ಮಾಡುವುದು ಅಗತ್ಯ. ಜ್ಞಾನ ಹೆಚ್ಚಿಸುವಂತಹ ಪ್ರವಾಸ ಮಾಡುವುದೂ ಅಗತ್ಯ. ಇವು ಅವರ ಸಾಮರ್ಥ್ಯ, ಕೆಲಸ, ಗುರಿಗಳನ್ನು ಶ್ರೀಮಂತಗೊಳಿಸುತ್ತವೆ.

1989ರಿಂದ ಅರಿಯರ್ಸ್‌ಗಳು ಕೊಡಲ್ಪಟ್ಟಿದ್ದರೂ ಅದರಲ್ಲಿ ಅನೇಕ ಲೋಪದೋಷಗಳಿವೆ. ಇವುಗಳನ್ನು ಪರಿಶೀಲಿಸಿ ಇಬ್ಬರಿಗೂ ಸಮ್ಮತವಾಗುವ ಕಾಲದೊಳಗೆ ಇವುಗಳೆಲ್ಲವನ್ನೂ ಕೊಡಬೇಕಾಗುತ್ತದೆ.

ಯಾವುದೇ ಕಾರಣವಿಲ್ಲದೇ ಅಥವಾ ನ್ಯಾಯಕ್ಕಾಗಿ ಕಾನೂನು ಮುರಿದವರನ್ನು ಅನ್ಯಥಾ ಕೆಲಸದಿಂದ ವಜಾ ಮಾಡಲಾಗಿದೆ. ಈ ರೀತಿಯ ಎಲ್ಲಾ ಕೆಲಸಗಾರರನ್ನೂ ಮತ್ತೆ ಕೆಲಸಕ್ಕೆ ಸೇರಿಸಿಕೊಳ್ಳಬೇಕು.

ಬೇಡಿಕೆ ಇತ್ತಿರುವ ಎಲ್ಲಾ ಆರ್ಥಿಕ ಸವಲತ್ತುಗಳನ್ನು ಕೂಡಾ 1-1-96ರಿಂದಲೇ ಕೊಡಬೇಕಾಗುತ್ತದೆ ಎಂದು ಮಹಿಳಾ ಸಮಖ್ಯ ಕಾರ್ಮಿಕ ಸಂಘಟನೆ ಒತ್ತಾಯಿಸುತ್ತದೆ.

ಈ ಕಾರ್ಮಿಕ ಸಂಘಟನೆಯ ಅಧ್ಯಕ್ಷರು ನಾಗಮ್ಮ ಡಿ.
ಹಾಗೂ ಜನರಲ್ ಸೆಕ್ರೆಟರಿ ಗಾಯತ್ರಿ ವಿ.

ಮೂಲ : **Mahila Samakya (K) Employees Association Our Charter of Demands.**

# ಪರಿಸರದ ಹೆಸರಿನಲ್ಲಿ ಫ್ಯಾಕ್ಟರಿ ಮುಚ್ಚಿದ ನಂತರ........

1996ರಲ್ಲಿ ದೆಹಲಿಯಲ್ಲಿ 168 ಕಾರ್ಖಾನೆಗಳನ್ನು ಪರಿಸರ ಮಾಲಿನ್ಯದ ಕಾರಣದಿಂದ ಬೇರೆ ಕಡೆ ಸ್ಥಳಾಂತರಿಸಬೇಕೆಂದು ಸರ್ವೋಚ್ಚ ನ್ಯಾಯಾಲಯ ತೀರ್ಪನ್ನು ನೀಡಿದೆ. ಈ ಆದೇಶದ ಪರಿಣಾಮವಾಗಿ ಸುಮಾರು 50,000 ಕಾರ್ಮಿಕರು ಬೀದಿ ಪಾಲಾಗಿದ್ದಾರೆ. ಈ ಆದೇಶ ನೀಡಿ ಒಂದು ವರ್ಷ ಕಳೆದರೂ, ಕಾರ್ಮಿಕರಿಗೆ ಸಿಗಬೇಕಾದ ಪರಿಹಾರವಾಗಲೀ, ಕಾರ್ಖಾನೆಯ ಸ್ಥಳಾಂತರವಾಗಲೀ ಕಾರ್ಯ ರೂಪಕ್ಕೆ ಬಂದಿಲ್ಲ.

ನ್ಯಾಯಾಲಯ ಕಾರ್ಮಿಕರಿಗೆ ಸಿಗಬೇಕಾದ ಪರಿಹಾರದ ಬಗ್ಗೆ ನೀಡಿದ ಆದೇಶವನ್ನು ಕಾರ್ಖಾನೆಯ ಮಾಲೀಕರು ಸಂಪೂರ್ಣವಾಗಿ ಉಲ್ಲಂಘಿಸಿದ್ದಾರೆ. ಪರಿಸರವನ್ನು ರಕ್ಷಿಸುವ ಕಾಳಜಿಯ ಹಿಂದೆ, ನಗರದ ಉಚ್ಚ ವರ್ಗ ಹಾಗೂ ರಿಯಲ್ ಎಸ್ಟೇಟ್ ಮಾಲೀಕರ ಹಿತಾಸಕ್ತಿಯನ್ನು ಕಾಪಾಡುವ ಉದ್ದೇಶ ಸ್ಪಷ್ಟವಾಗಿ ಕಂಡುಬರುತ್ತದೆ.

ಪರಿಸರ ಮಾಲಿನ್ಯಕ್ಕೆ ಕಾರಣವಾಗುವ ಕಾರ್ಖಾನೆಗಳನ್ನು ಮುಚ್ಚಲು ನೀಡಿದ ಆದೇಶದಿಂದಾಗಿ ಕಾರ್ಮಿಕರು ಬೀದಿ ಪಾಲಾಗಿದ್ದಾರೆ. ಬೀದಿ ಪಾಲಾದ ಕುಟುಂಬದ ಮಹಿಳಾ ಸದಸ್ಯರನ್ನು, ಮಹಿಳಾ ಕಾರ್ಮಿಕರನ್ನು ಸಂದರ್ಶಿಸಿ ದೆಹಲಿಯ ಜನವಾದಿ ಅಧಿಕಾರ್ ಮಂಚ್‌ನವರು ವರದಿನ್ನು ಪ್ರಕಟಿಸಿದ್ದಾರೆ. ಈ ಸಂದರ್ಶನದ ಮೂಲಕ ಬೀದಿಪಪಾಲಾದ ಕುಟುಂಬದ ಸ್ಥಿತಿಗತಿ, ಸ್ತ್ರೀಯರ ಮೇಲೆ ಹೇರಲಾದ ಹೊರೆಗಳ ಮೇಲೆ ಬೆಳಕು ಚೆಲ್ಲಲಾಗಿದೆ. ಪರಿಸರ ಚಳುವಳಿಯ ಹಿತಾಸಕ್ತಿಗಳು ಕಾರ್ಮಿಕರ ಹಿತಾಸಕ್ತಿಯನ್ನು ತಿರಸ್ಕರಿಸುವ ಬದಲು, ಎರಡೂ ಹೋರಾಟಗಳು ಕೈ ಜೋಡಿಸಬೇಕಾದ ಅಗತ್ಯವನ್ನು ಈ ವರದಿ ಒತ್ತಿ ಹೇಳುತ್ತದೆ.

ಐವತ್ತು ಸಾವಿರ ಕಾರ್ಮಿಕರು ದೆಹಲಿಯ ಉಮಾಶಂಕರ ಕಾಂಡೇವಾಲ ಮತ್ತು ಕಂನೋವಾಸ್ಟೀಲ್, ಬಿರ್ಲಾ ಕಾಟನ್‌ಮಿಲ್ ಮುಂತಾದ ಕಡೆಗಳಲ್ಲಿ ಕೆಲಸ ಮಾಡುತ್ತಿದ್ದರು. ಕಾರ್ಖಾನೆಗಳನ್ನು ಮುಚ್ಚಿದ ಬಳಿಕ ಈ ಕಾರ್ಮಿಕರು, ಕಾರ್ಮಿಕ ಕುಟುಂಬದವರು ನಿರ್ಗತಿಕರಾದರು. ಕೆಲಸ ಕಳೆದುಕೊಂಡು ನಿರುದ್ಯೋಗಿಗಳಾದ ಕಾರ್ಮಿಕರು ಚಿಕ್ಕ ಪುಟ್ಟ ಕೆಲಸಗಳನ್ನು ಹುಡುಕ ಬೇಕಾಯಿತು. ಬಹಳಷ್ಟು ಕಾರ್ಮಿಕರು ವಯೋಮಿತಿಯ ಹಾಗೂ ಕೆಲಸ ದೊರಕಿಸಿಕೊಳ್ಳುವ ಅವಕಾಶದಿಂದ ವಂಚಿತರಾದರು. ಮಹಿಳೆಯರು ಮಕ್ಕಳು ಕುಟುಂಬದ ಹಸಿವನ್ನು ನೀಗಿಸಲು ಚಿಕ್ಕ ಪುಟ್ಟ ಕೆಲಸಗಳನ್ನು ಮಾಡತೊಡಗಿದರು.

ಶ್ರೀರಾಂ ಫುಡ್ ಮತ್ತು ಫರ್ಟಿಲೈಜರ್‌ನಲ್ಲಿ ಕೆಲಸ ಮಾಡುತ್ತಿದ್ದ ಭೀಮಾದೇವಿಯ ಗಂಡ 500 ರೂ. ಸಂಪಾದಿಸುತ್ತಿದ್ದ. ಕೆಲಸ ಕಳೆದುಕೊಂಡ ಮೇಲೆ ರಿಕ್ಷಾ ಓಡಿಸಿ ದಿನಕ್ಕೆ 20 ರೂ. ಮಾತ್ರ ಸಂಪಾದಿಸುತ್ತಿದ್ದಾನೆ. ಇದೇ ಕಾರ್ಖಾನೆಯಲ್ಲಿ ದುಡಿಯುತ್ತಿದ್ದ ನೀತಾಳ ಗಂಡ ಕಾರ್ಖಾನೆ ಮುಚ್ಚುವುದಕ್ಕೆ ಮೊದಲು 2,200ರೂ ಮನೆಗೆ ಕೊಡುತ್ತಿದ್ದ. ಆದರೆ ಈಗ ಏನಾದರೂ ಕೆಲಸ ಸಿಕ್ಕಾಗ ಮಾತ್ರ ದಿನಕ್ಕೆ 60 ರೂ. ತಂದುಕೊಡುತ್ತಾನೆ. ಇಂತಹ ಹಲವಾರು ನಿದರ್ಶನಗಳನ್ನು ವರದಿ ಕೊಡುತ್ತದೆ. ಕೆಲಸ ಕಳೆದುಕೊಂಡ ಕುಟುಂಬದ ಎಲ್ಲಾ ಸದಸ್ಯರು ಹೆಚ್ಚು ಸಮಯ ಹಾಕಿ, ಕಷ್ಟಕರ ಕೆಲಸಗಳನ್ನು ಕಡಿಮೆ ಆದಾಯಕ್ಕೆ ಮಾಡುವುದು ಅನಿವಾರ್ಯವಾಗಿದೆ. ಸ್ತ್ರೀಯರು ಮನೆಯಿಂದ ಹೊರಗೆ ದುಡಿಯಲು ಮುಕ್ತ ವಾತಾವರಣವಿಲ್ಲದ ಕಾರಣ ಗೃಹಸಂಬಂಧಿತ ಕೆಲಸಗಳನ್ನು ಮಾಡಬೇಕಾಗಿದೆ.

ಬಹುಪಾಲು ಮಹಿಳೆಯರು ಕುಟುಂಬದ ಸಂಕಷ್ಟವನ್ನು ಎದುರಿಸಲು ವಿವಿದ ಕೆಲಸಗಳಿಗೆ ಮೊರೆ ಹೋಗುತ್ತಿದ್ದಾರೆ. ಮೊದಲು ಎಂದೂ ಮಾಡದಿರುವ ಕೆಲಸಗಳನ್ನು ಮಾಡುವುದರ ಜೊತೆಗೆ ಕುಟುಂಬ ಅಸಹಕಾರ, ಹೊರಗಿನ ಸಮಾಜದ ಕಿರುಕುಳಗಳನ್ನು ಮೌನವಾಗಿ ಸಹಿಸಬೇಕಾಗಿದೆ. ಈ ಕಾರ್ಮಿಕರಲ್ಲಿ ಸ್ವಂತ ಮನೆಯನ್ನು ಹೊಂದಿರುವವರ ಸಂಖ್ಯೆ ತೀರಾ ಕಡಿಮೆ. ಕೆಲವರು ಕೊಳಚೆ ಪ್ರದೇಶಗಳಲ್ಲಿ ಮನೆಗಳನ್ನು ಕಟ್ಟಿಕೊಂಡಿದ್ದರೂ ಸದಾ ಮನೆಗಳನ್ನು ಕೆಡವುಬಹುದೆಂಬ ಆಂತಕದಿಂದಲೂ ಬದುಕುತ್ತಾರೆ. ಮನೆಗಳನ್ನು ಕೆಡುವಿದರೆ, ಅಥವಾ ಖಾಲಿ ಮಾಡಿದರೆ, 500 ಅಥವಾ 600 ರೂಗಳನ್ನು ಬಾಡಿಗೆ ನೀಡಿ ಬದುಕುವುದು ಕನಸಿನಲ್ಲೂ ಸಾಧ್ಯವಾಗದ ಮಾತು.

ದೆಹಲಿಯ ಅಮರ್ ಪಾರ್ಕ್‌ನ ಬಳಿ ಇರುವ ಕೊಳಚೆ ಪ್ರದೇಶದಲ್ಲಿ ವಾಸಿಸುವ ಕಾರ್ಮಿಕರು ಬಯಲಿನಲ್ಲಿ ಬದುಕುತ್ತಾರೆ. ಮನೆಗಳನ್ನು ಕಟ್ಟಲು ಕಷ್ಟಪಟ್ಟು ಸಾಮಾನುಗಳನ್ನು ಹೊಂದಿಸಿಕೊಂಡರೆ, ಲ್ಯಾಂಡ್ ಮಾಫಿಯಾ ಗ್ಯಾಂಗ್‌ನಿಂದ ಅವುಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಬಿರ್ಲಾಮಿಲ್ ವಸತಿಗೃಹ, ಸ್ವತಂತ್ರ ಭಾರತ್ ವಸತಿ ಗೃಹಗಳಲ್ಲಿ ವಾಸಿಸುತ್ತಿರುವ

ಕಾರ್ಮಿಕರ ಸ್ಥಿತಿ ಸ್ವಲ್ಪ ಉತ್ತಮವಾಗಿದ್ದರೂ, ಆಡಳಿತ ವರ್ಗದ ಕಿರುಕುಳದ ನೆರಳಿನಲ್ಲಿ ಬದುಕಬೇಕಾಗುತ್ತದೆ.

ಕೆಲಸ ಕಳೆದುಕೊಂಡ ಕುಟುಂಬಗಳು ಸಾಲ ಸೋಲ ಮಾಡಿ ಜೀವನವನ್ನು ನಿರ್ವಹಿಸುತ್ತಿವೆ. ಹತ್ತು ಹನ್ನೆರಡು ತಿಂಗಳಿನಿಂದ ಬಾಡಿಗೆ ಕೊಡಲಾಗದೇ ಕುಟುಂಬಗಳು ನರಳುತ್ತಿವೆ. ಇದ್ದ ಬದ್ದ ಒಡವೆಗಳನ್ನು ಮಾರುವುದು, ಅಡವಿಡುವುದು, ಹೆಚ್ಚು ಬಡ್ಡಿ ಸಾಲ ತರುವುದು, ಮನೆಯಲ್ಲಿರುವ ಟಿ.ವಿ, ವ್ಯಾನು, ಮುಂತಾದವುಗಳನ್ನು ಮಾರುವುದು ಮುಂತಾದವುಗಳಿಂದ ಜೀವನ ನಿರ್ವಹಿಸುತ್ತಿದ್ದಾರೆ. ಸಾಲ ತೀರಿಸಲಾರದವರು ವಿವಿಧ ರೀತಿಯ ಕಿರುಕುಳಕ್ಕೆ ಒಳಗಾಗುತ್ತಾರೆ. ಹೀಗೆ ಬದುಕುವ ಕಾರ್ಮಿಕರ ಜೀವನ ಒಂದು ರೀತಿಯಲ್ಲಿ ವಿಷ ಚಕ್ರ. ಸಾಲ ಮಾಡುವುದು ಈ ಕುಟುಂಬಗಳಿಗೆ ಅನಿವಾರ್ಯವಾದ ವಿಚಾರವಾಗಿದೆ. E.S.I. ಸೌಲಭ್ಯಗಳನ್ನು ಸಹ ಕಿತ್ತುಕೊಳ್ಳಲಾಯಿತು. ಗ್ರಾಮಗಳಲ್ಲಿ ಸಂಪ್ರದಾಯ ಸಮಾಜ ನಿರೀಕ್ಷಿಸುವ ಮದುವೆ, ಸಮಾರಂಭ ಮುಂತಾದ ಕಾರ್ಯಗಳಿಗೆ ಸಾಲ ಹೆಗಲ ಮೇಲೆ ಹೊರುವುದು ಅನಿವಾರ್ಯ.

ಶ್ರೀರಾಮು ಫುಡ್ ಮತ್ತು ಫರ್ಟಿಲೈಸರ್‌ನಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕನ ಹೆಂಡತಿ ಪಾರ್ವತಿ. ಮಕ್ಕಳ ಸ್ಕೂಲಿನ ಫೀಗಾಗಿ ದೆಹಲಿಯಲ್ಲಿ ಕೆಲಸ ಮಾಡುತ್ತಿದ್ದ ಗಂಡನಿಗೆ ಪತ್ರ ಬರೆದಾಗ ಆವಳಿಗೆ ಕಾರ್ಖಾನೆ ಮುಚ್ಚಿದ ವಿಚಾರ ತಿಳಿಯಿತು. ಪಾರ್ವತಿ ಮಕ್ಕಳ ಸ್ಕೂಲಿನ ಫೀಗಾಗಿ ತನ್ನಲ್ಲಿನ ಒಡವೆಗಳನ್ನು ಮಾರಿ ಬಂದ ಹಣದಿಂದ ಸ್ಕೂಲಿನ ಫೀ ಕಟ್ಟಿದಳು. ಕಾರ್ಖಾನೆ ಮುಚ್ಚಿದ ನಂತರ ಅಲ್ಪಸ್ವಲ್ಪ ಹಣವನ್ನು ತಂದೆ ತಾಯಿಗೆ ಕಳಿಸುತ್ತಿದ್ದವರು ಸಹ ಸಂಪೂರ್ಣವಾಗಿ ನಿಲ್ಲಿಸ ಬೇಕಾಯಿತು.

ಕಾರ್ಖಾನೆಯ ಕಾರ್ಮಿಕರಿಗೆ ದೊರೆಯುತ್ತಿದ್ದ ಇ.ಎಸ್.ಐ. ಅನುಕೂಲವನ್ನು ಕಾನೂನುಬಾಹಿರವಾಗಿ ರದ್ದುಗೊಳಿಸಲಾಯಿತು. ಕುಟುಂಬದ ಮಹಿಳಾ ಸದಸ್ಯರಿಗೆ, ಮಕ್ಕಳಿಗೆ ಸಾಮಾನ್ಯ ಕಾಯಿಲೆಗಳು ಬಂದಾಗ ಖಾಸಗೀ ವೈದ್ಯರ ಜೊತೆ ಹೋಗಬೇಕಾಯಿತು. ಕಿರಣ್ ಕುಮಾರನ ಹೆಂಡತಿ ರಕ್ತ ಹೀನತೆ ಹಾಗೂ ಅಪೌಷ್ಟಿಕತೆಯಿಂದ ನರಳುತ್ತಿದ್ದು ಇ.ಎಸ್.ಐ. ಆಸ್ಪತ್ರೆಗೆ ಸೇರಿಸಿಕೊಳ್ಳಲು ನಿರಾಕರಿಸಿದ ಕಾರಣ ಅಸು ನೀಗಿದಳು.

ಬಿರ್ಲಾಮಿಲ್ ಕಾರ್ಮಿಕರಿಗೆ ಈ ಅನುಕೂಲವನ್ನು ನೀಡಿದ್ದರು. ಕಾರ್ಖಾನೆ ಮುಚ್ಚಿದ ನಂತರ ಹುಟ್ಟಿದ ಮಕ್ಕಳು ಈ ಸೌಲಭ್ಯದಿಂದ ವಂಚಿತರಾಗಿದ್ದಾರೆ. ಕಾರ್ಖಾನೆಗಳನ್ನು ಮುಚ್ಚಿದ್ದರೂ, ಪರಿಹಾರದ ಬಗ್ಗೆ ಯಾವುದೇ ನಿರ್ಧಾರವನ್ನು ತೆಗೆದುಕೊಂಡಿರದೇ ಇರುವ ಸ್ಥಿತಿಯಲ್ಲಿ ಈ ಸೌಲಭ್ಯವನ್ನು ರದ್ದುಗೊಳಿಸಲಾಗಿದೆ.

ಬಹುಪಾಲು ಕುಟುಂಬದ ಹೆಂಗಸರು ಕಾರ್ಖಾನೆಯು ಮುಚ್ಚಿದ ನಂತರ ತಮ್ಮ ಮಕ್ಕಳ, ಕುಟುಂಬದ ಭವಿಷ್ಯದ ಬಗ್ಗೆ ನಿರಂತರವಾದ ಆತಂಕದಲ್ಲಿ ಬದುಕುತ್ತಿದ್ದಾರೆ. ಗಂಡು ಮಗುವಿನ ಆಸೆಗಾಗಿ ಗರ್ಭ ಧರಿಸುತ್ತಾರೆ. ಇದನ್ನು ನಿಯಂತ್ರಿಸುವ ಹಕ್ಕು ಸಹ ಅವರಿಗಿಲ್ಲ. ದುಡಿಯಲೇ ಬೇಕಾದ ಮಹಿಳೆಯರು ಗರ್ಭಿಣಿಯರಾಗುವುದರಿಂದ ಕೆಲಸ ಬಿಡಬೇಕಾದ ಅಥವಾ ಕೆಲಸ ಕಳೆದುಕೊಳ್ಳುವ ಭಯದಿಂದ ಹತಾಶರಾಗಿದ್ದಾರೆ.

ಕುಟುಂಬದ ಜವಾಬ್ದಾರಿಯನ್ನು ಸಂಪೂರ್ಣವಾಗಿ ಮಹಿಳೆಯರ ಮೇಲೆಯೇ ಹೇರಲಾಗುತ್ತದೆ. ಕಾರ್ಖಾನೆ ಮುಚ್ಚಿದ ಮೇಲೆ ಮನೆಯ ಸದಸ್ಯರಿಗೆ ಆಯಾ ದಿನಕ್ಕೆ ಊಟಕ್ಕೆ ಹೊಂದಿಸುವುದು, ಮರುದಿನಕ್ಕೆ ಬೇಕಾದುದನ್ನು ಹೊಂದಿಸುವುದು ಹೆಂಗಸರ ಹೆಗಲ ಮೇಲೆಯೇ ಬೀಳುತ್ತಿತ್ತು. ಕಾರ್ಖಾನೆ ಮುಚ್ಚಿದ ಪರಿಣಾಮವಾಗಿ ಸ್ತ್ರೀಯರು ಖರ್ಚು ಕಡಿಮೆ ಮಾಡುತ್ತಿರುವುದು ಕುಟುಂಬ ಆಹಾರದಲ್ಲಿ, ಮಕ್ಕಳಿಗೆ ಹಾಲನ್ನು ಕೊಡುವುದನ್ನು ಬಹುಪಾಲು ಕುಟುಂಬಗಳಲ್ಲಿ ನಿಲ್ಲಿಸಲಾಗಿದೆ. ಆಹಾರ ಪದಾರ್ಥಗಳನ್ನು ಕೊಳ್ಳುವುದರಲ್ಲಿ ಕಡಿಮೆ ಮಾಡುವುದು, ಕಡಿಮೆ ತರಕಾರಿ ಬೆಳೆಸುವುದು, ಸಾಮಾನ್ಯವಾಗಿ ಕಂಡು ಬರುವ ಸಂಗತಿಗಳು. ಹೆಚ್ಚು ಕುಟುಂಬಗಳಿಗೆ ಮೀನು, ಮಾಂಸ, ಮಕ್ಕಳಿಗೆ ಹಣ್ಣು ಹಂಪಲನ್ನು ಕೊಳ್ಳುವುದು ಕನಸಿನ ಮಾತಾಗಿದೆ. ಗರ್ಭಿಣಿ ಹೆಂಗಸರು, ಹಾಲುಡುವ ಹೆಂಗಸರು ರಕ್ತಹೀನತೆಯಿಂದ ಬಳಲುತ್ತಿರುವುದು ಸರ್ವೇ ಸಾಮಾನ್ಯವಾಗಿದೆ.

ಕಾರ್ಖಾನೆಗಳು ಮುಚ್ಚಿದ ನಂತರ ಕುಟುಂಬದಲ್ಲಿ ಸ್ತ್ರೀಯರ ಮೇಲೆ ನಡೆಯುವ ಹಿಂಸೆಯು ತೀವ್ರ ಸ್ವರೂಪದಲ್ಲಿ ಹೆಚ್ಚಿದೆ. ಮನೆಗೆ ಬೇಕಾದ ಸಾಮಾನು ಕೊಳ್ಳುವುದರಲ್ಲಿ ಕಡಿತ ಹಾಗೂ ನಾಳೆಯ ಅನಿಶ್ಚಯತೆಗೂ ಸ್ತ್ರೀಯರ ಮೇಲೆ ನಡೆಯುವ ಹಿಂಸೆಗೂ ಹತ್ತಿರದ ಸಂಬಂಧವಿದೆ. ಪುರುಷರ ಹತಾಷೆಯ ಮನಸ್ಥಿತಿಗೆ ಮಹಿಳೆಯರು ಬಲಿಯಾಗುತ್ತಾರೆ. ಸ್ತ್ರೀಯರು ಸಹಜವೆಂಬಂತೆ ಪುರುಷರ ಕೊರತೆಯನ್ನು ಒಪ್ಪಿಕೊಳ್ಳುತ್ತಾರೆ. ಒಟ್ಟಾರೆಯಾಗಿ ಸ್ತ್ರೀಯರ ಮೇಲೆ ಕುಟುಂಬದ ಎಲ್ಲಾ ಹೊರೆಯನ್ನು ಹೊರಿಸಲಾಗುತ್ತದೆ.

ಹತಾಷೆ, ಅವಮಾನದಿಂದ ನರಳುವ ಕುಟುಂಬಗಳು ಸಂಬಂಧಿಕರಿಂದಲೂ ದೂರವಾಗುತ್ತಾರೆ. ಮದುವೆ ಮಾಡಿಕೊಟ್ಟ ಹೆಣ್ಣು ಮಕ್ಕಳಿಗೆ ಅದರಾತಿಥ್ಯ ಮಾಡಲಾಗದೇ, ಅವರಿಗೆ

ಕೊಡಬೇಕಾದ ವಸ್ತುಗಳನ್ನು ಕೊಡಲಾಗದೇ ಅವರಿಂದ ಸಹಜವಾಗಿ ದೂರವಾಗಿರಲು ಬಯಸುತ್ತಾರೆ. ಆರ್ಥಿಕ ಸಮಸ್ಯೆಯ ಜೊತೆಗೆ ಸಂಪ್ರದಾಯ ಮೂಢ ನಂಬಿಕೆಗಳು ಬಲವಾಗಿ ಬೇರೂರಿರುವುದರಿಂದ, ಸಂಬಂಧಗಳೂ ಸಹ ಮುಖ್ಯವಾಗದೇ ಕಳಚಿಕೊಳ್ಳುತ್ತವೆ. ತನ್ನ ಮಗಳಿಗೆ ಹೆರಿಗೆಯಾಗಿದ್ದರೂ, ಮಗಳಿಗೆ ಏನೂ ಕೊಡದ ಸ್ಥಿತಿಯಲ್ಲಿ ತಾನಿದ್ದರಿಂದ ಶಾಹಿನ್ ಮಗಳನ್ನು ನೋಡಲು ಸಹ ಹೋಗಲಿಲ್ಲ.

ಸಂಬಂಧಿಕರ ಮನೆಗಳಲ್ಲಿ ನಡೆಯುವ ಕಾರ್ಯಗಳಲ್ಲಿ ಭಾಗವಹಿಸುವುದನ್ನು ಸ್ತ್ರೀಯರು ನಿಲ್ಲಿಸಿಬಿಟ್ಟಿದ್ದಾರೆ. ಒಂದು ಹೊತ್ತಿನ ಊಟಕ್ಕಾಗಿ ಪರದಾಡುವ ಸ್ಥಿತಿಯಲ್ಲಿ ಬೇರೆಯವರ ಮನೆಯ ಶುಭ ಕಾರ್ಯಗಳಲ್ಲಿ ಭಾಗವಹಿಸಲು ಅವಮಾನದಿಂದ ಹಿಂಜರಿಯುತ್ತಾರೆ. ದೂರದ ರಾಜ್ಯಗಳಿಂದ ಬಂದ ಕುಟುಂಬದ ಸ್ತ್ರೀಯರಂತೂ ಎರಡು-ಮೂರು ವರ್ಷಗಳಾದರೂ ತಂದೆ ತಾಯಿಯರನ್ನು ನೋಡಲಾಗದ ಸ್ಥಿತಿಯಲ್ಲಿ ಇದ್ದಾರೆ. ರೈಲು ಚಾರ್ಜು ಹೊಂದಿಸಲಾಗದೇ ಅಸಹಾಯಕತೆಯಿಂದ ಕೈ ಚೆಲ್ಲಿ ಕುಳಿತು ಬಿಡುತ್ತಾರೆ.

ಕಾರ್ಖಾನೆಗಳು ಮುಚ್ಚಿದುದರ ನೇರ ಪರಿಣಾಮಗಳನ್ನು ಕುಟುಂಬದ ಮಕ್ಕಳು ಎದುರಿಸುತ್ತಿದ್ದಾರೆ. ಇದು ಮಕ್ಕಳ ಜೀವನದ ದಿಕ್ಕನ್ನು ಬದಲಾಯಿಸುವ ಸಂಕ್ರಮಣ ಸ್ಥಿತಿಯಾಗಿದೆ. 10, 12ನೇ ತರಗತಿಯ ಪರೀಕ್ಷೆಗೆ ತಯಾರಿ ನಡೆಸುತ್ತಿದ್ದ ಪರಿಸ್ಥಿತಿಯಲ್ಲಿ ಕಾರ್ಖಾನೆಗಳು ಮುಚ್ಚಿದ್ದರಿಂದ ಬಹುಪಾಲು ಮಕ್ಕಳಿಗೆ ಪರೀಕ್ಷೆಯ ಫೀ ಕಟ್ಟಲಾಗಿಲ್ಲ. ಗಂಡು ಮತ್ತು ಹೆಣ್ಣು ಮಕ್ಕಳು ತಾರತಮ್ಯದಿಂದ ನಡೆಸಿಕೊಳ್ಳುವ ಪರಿಸ್ಥಿತಿಯಲ್ಲಿ ಗಂಡು ಮಕ್ಕಳ ಪರಿಸ್ಥಿತಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗುತ್ತಿದೆ. ITI ತರಬೇತಿಗೆ ಹೋಗುತ್ತಿದ್ದ ವಿದ್ಯಾರ್ಥಿನಿಯೊಬ್ಬಳು ಫೀ ಕಟ್ಟಲಾಗದೆ, ವಿದ್ಯಾಭ್ಯಾಸವನ್ನು ನಿಲ್ಲಿಸಿ ಕುಟುಂಬಕ್ಕಾಗಿ ದುಡಿಯಬೇಕಾಯಿತು. ಕೆಲವು ಕುಟುಂಬಗಳು ವಾಪಸ್ಸು ಹೋದುದರ ಪರಿಣಾಮ ಮಕ್ಕಳು ವಿದ್ಯಾಭ್ಯಾಸದಿಂದ ವಂಚಿತರಾಗಬೇಕಾಯಿತು. ಕೆಲವು ಮಕ್ಕಳನ್ನು ಖಾಸಗಿ ಶಾಲೆಗಳಿಂದ ಬಿಡಿಸಿ ಸರಕಾರಿ ಶಾಲೆಗೆ ಸೇರಿಸಲಾಯಿತು. ಬಹುಪಾಲು ಮಕ್ಕಳು ವಿದ್ಯಾಭ್ಯಾಸಕ್ಕೆ ತಿಲಾಂಜಲಿ ನೀಡಬೇಕಾಯಿತು. ಓದುವುದರ ಜೊತೆಗೆ ಕೆಲಸ ಮಾಡುವುದು ಸಹ ಕಂಡುಬರುತ್ತಿದೆ. ದುಡಿದು ಬರುವ ಮಕ್ಕಳಿಗೆ 'ಓದಲು ಸಮಯದ ಕೊರತೆ'ಯಿಂದಾಗಿ ವಿದ್ಯಾಭ್ಯಾಸಕ್ಕೆ ತೊಂದರೆಯಾಗಿರುವುದು ಕಂಡು ಬರುತ್ತಿದೆ.

ಹೆಣ್ಣು ಮಕ್ಕಳು ತಾಯಂದಿರು ಮಾಡುವ ಕೆಲಸಗಳಿಗೆ ನೆರವಾಗುತ್ತಾರೆ. ತಂದೆ-ತಾಯಂದಿರು ಹೆಣ್ಣು ಮಕ್ಕಳ ಮದುವೆಗೆ ಬೇಕಾದ 'ಹಣದ' ಬಗ್ಗೆ ಸದಾ ಕೊರಗುತ್ತಾರೆ. ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸಲು ನಾವು ಅನರ್ಹರು ಎಂಬ ಭಾವನೆಯಿಂದ ತಂದೆ-ತಾಯಿಯರು ನರಳುತ್ತಾರೆ. ಈ ಒತ್ತಡದಿಂದಾಗಿ ಹೆಣ್ಣು ಮಕ್ಕಳು ಸದಾ ಮಾನಸಿಕ ಹಿಂಸೆಯಿಂದ ನರಳುತ್ತಾರೆ. ಮಾನಸಿಕ ಹಿಂಸೆಯಿಂದ ನರಳುವ ಯುವತಿಯೊಬ್ಬಳು ಸದಾ ಮೌನವಾಗಿರುತ್ತಾಳೆ. ತಂದೆ-ತಾಯಂದಿರಲ್ಲಿ ಜಗಳವಾದಾಗ 'ನನ್ನ ಮದುವೆಯ ಬಗ್ಗೆ ದಯವಿಟ್ಟು ಯೋಚಿಸಬೇಡಿ' ಎಂದು ಬೇಡುತ್ತಾಳೆ.

ಪರಿಸರ ಮಾಲಿನ್ಯದ ಕಾರಣದಿಂದ ಕಾರ್ಖಾನೆಗಳು ಮುಚ್ಚಿದ್ದರಿಂದ ಅಸಂಘಟಿತ ಕಾರ್ಮಿಕರು ಹೆಚ್ಚು ಶೋಷಣೆಗೆ ಒಳಗಾಗಿದ್ದಾರೆ. ಇದರ ಪರಿಣಾಮ ಹಾಗೂ ವಿವಿಧ ಆಯಾಮಗಳು ಕುಟುಂಬದ ಮೇಲೆ ವಿಶೇಷವಾಗಿ ಸ್ತ್ರೀಯರ ಮೇಲೆ ಹೇರುತ್ತಿರುವುದು ಕಂಡು ಬರುತ್ತಿದೆ.

58 ವರ್ಷ ವಯಸ್ಸಿನ ತಾರಾದೇವಿ ಮೂರು ದಶಕಗಳಿಂದ ಜೀವನ ನಡೆಸಲು ಹೋರಾಡುತ್ತಿರುವವರು. ಬಿರುಗಾಳಿ ದುರಂತದಲ್ಲಿ ಮಾವ, ಗಂಡ, ಮಗನನ್ನು ಕಳೆದುಕೊಂಡ ಈಕೆ ಗಂಡನಿಗೆ ದೊರೆತ ಕಾರ್ಖಾನೆಯ ಮನೆಯಲ್ಲಿ ತಿಂಗಳಿಗೆ 15 ರೂ. ಬಾಡಿಗೆ ನೀಡಿ ವಾಸವಾಗಿದ್ದಾಳೆ.

ಗಂಡನ ಮರಣದ ನಂತರ ಬಿರ್ಲಾ ಕಾಟನ್ ಮಿಲ್‌ನಲ್ಲಿ ಹತ್ತಿ ಶುಚಿ ಗೊಳಿಸುವ ಕೆಲಸವನ್ನು ತಾರಾದೇವಿಗೆ ನೀಡಲಾಯಿತು. ಇತ್ತೀಚೆಗೆ ಗರ್ಭಿಣಿಯಾದ ಸೊಸೆಯನ್ನು ಕರೆದುಕೊಂಡ ಈಕೆ ಮಗನ ಮಕ್ಕಳನ್ನು ಸಾಕುವ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕಾಯಿತು. 12 ವರ್ಷ ವಯಸ್ಸಿನ ಮೊಮ್ಮಕ್ಕಳು ಮನೆಯ ಜವಾಬ್ದಾರಿ, ಎಳೆಯ ಮಕ್ಕಳನ್ನು ನೋಡಿಕೊಳ್ಳಬೇಕಾದುದರಿಂದ ಸ್ಕೂಲು ಬಿಡಬೇಕಾಯಿತು. ಈ ದುರಂತದಿಂದ ಚೇತರಿಸಿಕೊಳ್ಳುತ್ತಿದ್ದ ಹಾಗೆಯೇ ಬಿರ್ಲಾ ಕಾರ್ಖಾನೆಯನ್ನು ಮುಚ್ಚಲಾಯಿತು. ಅರೆಗೂಲಿ ನೌಕರನಾದ ಮಗನೂ ಸಹ ಕೆಲಸ ಕಳೆದುಕೊಂಡ. ಕುಟುಂಬ ಒಂದು ಹೊತ್ತಿನ ಊಟಕ್ಕೂ ಸಹ ಸಾಲ ಮಾಡಬೇಕಾಯಿತು. ಮನೆಯಲ್ಲಿರುವ ಬೆಲೆ ಬಾಳುವ ವಸ್ತುಗಳನ್ನು ಮಾರಲಾಯಿತು.

ಮನೆಗೆ ಬೇಕಾದುದನ್ನು ಹೊಂದಿಸುವುದರ ಜೊತೆಗೆ ನಿರುದ್ಯೋಗಿ ಮಗನಿಗೆ ಬಿಡಿಗಾಸು ಕೊಡಬೇಕಾಗುತ್ತದೆ. ಕಾರ್ಖಾನೆಯ ಪರಿಹಾರ ಧನ ಕೈಗೆ ಸಿಕ್ಕರೆ ತಾನು ಇದುವರೆಗೂ ಮಾಡಿದ ಸಾಲವನ್ನು ತೀರಿಸಬಹುದೆಂದು ಜಾತಕ ಪಕ್ಷಿಯಂತೆ ಕಾಯುತ್ತಿದ್ದಾಳೆ.

*ಕೃಪೆ : Things Fall Apart*
*Report by Janawadi Adhikar Manch*

# "ಸನಾಕೈಥೈಲ್"

## ಮಣಿಪುರದ ಮಹಿಳೆಯರ ಮಾರುಕಟ್ಟೆ

ಮಣಿಪುರದ 'ಸನಾಕೈಥೆಲ್' ಅಥವಾ ಈಗ 'ನುಪಿಕೈಥೆಲ್' ಎಂದು ಜನಪ್ರಿಯವಾಗಿರುವ ಮಹಿಳೆಯರ ಮಾರುಕಟ್ಟೆ ವಿಶಿಷ್ಟವಾದದ್ದು. ಮಣಿಪುರದ ಪ್ರಮುಖ ಮಾರುಕಟ್ಟೆಯಾಗಿರುವ ಇದರ ಸಂಘಟನೆ ಹಾಗೂ ನಿರ್ವಹಣೆ ಪೂರ್ಣ ಮಹಿಳೆಯರದೇ.

ಇಷ್ಟು ದೊಡ್ಡದಾದ ಅರ್ಥ ವ್ಯವಸ್ಥೆಯನ್ನು ಮಹಿಳೆಯರೇ ದೊಡ್ಡ ಪ್ರಮಾಣದಲ್ಲಿ ನಿರ್ವಹಿಸುವ ವ್ಯವಸ್ಥೆ ಭಾರತದ ಬೇರೆಲ್ಲೂ ಇಲ್ಲ. ಹೀಗಾಗಿಯೇ ಆಗ್ನೇಯ ಏಷ್ಯಾದಲ್ಲಿ ಸ್ಥಳೀಯ ಮಾರುಕಟ್ಟೆಗಳನ್ನು ಸಾಮಾನ್ಯವಾಗಿ ಮಹಿಳೆಯರೇ ನಿಯಂತ್ರಿಸಿ, ನಿರ್ವಹಿಸಿದರೂ ಭಾರತದಲ್ಲಿ ಇದು ವಿಶಿಷ್ಟ ಸ್ಥಾನ ಪಡೆಯುತ್ತದೆ.

ಮಹಿಳೆಯರೇ ನಡೆಸುವ ಮಾರುಕಟ್ಟೆಗಳು ಮಣಿಪುರದ ಪ್ರತಿ ಗ್ರಾಮ-ಪಟ್ಟಣಗಳಲ್ಲಿ ಇದ್ದರೂ, ಇಂಫಾಲದಲ್ಲಿರುವ ನುಪಿಕೈಥೆಲ್, ರಾಜ್ಯದ ಇಡೀ ಅರ್ಥ ವ್ಯವಸ್ಥೆಗೆ ಕೊಡುಗೆ ನೀಡುವ ಹಾಗೂ ಪ್ರಭಾವ ಬೀರುವ ಸಂಸ್ಥೆಯಾಗಿ ಪ್ರಮುಖ ಸ್ಥಾನಮಾನ ಗಳಿಸಿಕೊಂಡಿದೆ. ಈ ಸಮಾಜದ ಅನೇಕ ಉನ್ನತ ಅಧಿಕಾರಿಷಾಹಿ ಹಾಗೂ ವೃತ್ತಿಪರರು, ತಮ್ಮ ಶಿಕ್ಷಣ ಹಾಗೂ ಏಳಿಗೆಗೆ ಆರ್ಥಿಕವಾಗಿ ಬೆಂಬಲ ನೀಡಿದ ತಮ್ಮ ತಾಯಂದಿರನ್ನು ಸ್ಮರಿಸುತ್ತಾರೆ.

ಅನೇಕ ಪಾರಂಪರಿಕ ಉದ್ಯೋಗಗಳು ಸಾಯುತ್ತಿರುವುದರಿಂದ, ಹಣಕಾಸು ಗಳಿಕೆಗೆ ಲಭ್ಯವಿರುವ ಏಕೈಕ ಮಾರ್ಗವಾಗಿ ಚಿಲ್ಲರೆ ವ್ಯಾಪಾರದಲ್ಲಿ ತೊಡಗುವುದು ಮಹಿಳೆಯರಿಗೆ ಅನಿವಾರ್ಯವಾಗಿರುವುದರಿಂದ ಇತ್ತೀಚಿನ ವರ್ಷಗಳಲ್ಲಿ ಮಾರುಕಟ್ಟೆಯೂ ವಿಸ್ತೃತಗೊಳ್ಳುತ್ತಿದೆ.

'ಕೈಥೆಲ್ ನುಪಿ' ಅಥವಾ ಮಣಿಪುರದ ಮಾರುಕಟ್ಟೆ ಮಹಿಳೆಯ ಜೀವಂತ ದಂತಕಥೆ. ಆಕೆ ಇಂಫಾಲ ನಗರ ಅಥವಾ ಈ ಪ್ರದೇಶದ ಎಲ್ಲಾ ಮಾರುಕಟ್ಟೆ ಪ್ರದೇಶಗಳಲ್ಲಿ ಕಂಡು ಬರುವಂತಹವಳು. ಆಕೆಯ ಹಾಜರಿ ಇಲ್ಲದೆ ಮಾರುಕಟ್ಟೆಗೆ ಅರ್ಥವೇ ಇಲ್ಲ. ಈ ಮಾರುಕಟ್ಟೆಗಳ ಮೂಲಕ ಮಹಿಳೆಯರೇ ವ್ಯಾಪಾರ ವಹಿವಾಟಿನ ಹೊಣೆ ಹೊತ್ತಿದ್ದರು. ನೂರು ವರ್ಷಗಳ ಹಿಂದೆ ಈ ಮಾರುಕಟ್ಟೆ ಕುರಿತ ಬ್ರಿಟಿಷ್ ಲೆಕ್ಕಪತ್ರಗಳು ಈ ಪ್ರಕ್ರಿಯೆ ಕುರಿತು ಪ್ರಸ್ತಾಪಿಸಿವೆ. ವಿದೇಶಿಯರನ್ನು ಬಿಟ್ಟರೆ ಪುರುಷರನ್ನು ಈ ಮಾರುಕಟ್ಟೆ ಪ್ರದೇಶಕ್ಕೆ ಬಿಡುತ್ತಿರಲಿಲ್ಲ ಎಂದೂ ಅವರು ಹೇಳುತ್ತಾರೆ.

ಅರ್ಥ ವ್ಯವಸ್ಥೆಯ ಮೇಲಿನ ಈ ನಿಯಂತ್ರಣದಿಂದ ಮಹಿಳೆಯರನ್ನು ಹೊರದಬ್ಬುವುದಕ್ಕಾಗಿ ಬ್ರಿಟಿಷರು ಪ್ರಯತ್ನಗಳನ್ನು ನಡೆಸಿದಾಗ, ಅವರು ಮಣಿಪುರದ ಸ್ವಾತಂತ್ರ್ಯ ಹೋರಾಟದ "ನುಪಿಲಾನ" ಚಳುವಳಿಯನ್ನು ಆರಂಭಿಸಿದರು. ಆದರೆ ಬ್ರಿಟಿಷ್ ಮಿಲಿಟರಿ ಪ್ರಾಬಲ್ಯ ಈ ಆಂದೋಲನವನ್ನು ಹತ್ತಿಕ್ಕಿ ಹಲವಾರು ಸುಧಾರಣೆಗಳನ್ನು ಜಾರಿಗೆ ತಂದಿತು. ಇದರಿಂದ ನುಪಿ ಕೈಥೆಲ್‌ನ ಅವನತಿ ಆರಂಭವಾಯಿತು'.

'ನುಪಿಲಾನ್' ನಂತರ ಭಾರತದ ವರ್ತಕರ ಸಮುದಾಯದ ಪುರುಷರು ನಿಯಂತ್ರಿಸುವ ಪ್ರತಿಸ್ಪರ್ಧಿ ಮಾರುಕಟ್ಟೆಗಳನ್ನು ಮಣಿಪುರದಲ್ಲಿ ಬ್ರಿಟಿಷರು ಸ್ಥಾಪಿಸಿದರು. ಆನಂತರ ಈ ಪ್ರದೇಶದಲ್ಲಿ ಅರ್ಥ ವ್ಯವಸ್ಥೆಯ ಮೇಲಿನ ಮಹಿಳೆಯರ ನಿಯಂತ್ರಣ ಕುಸಿಯಿತು.

ಈ ಅವನತಿಗೆ ಭಾರತೀಯ ಆರ್ಥಿಕ ಹಾಗೂ ಹಣಕಾಸು ನೀತಿಗಳೂ ಭಾರೀ ಹೊಡೆತ ನೀಡಿದವು. ಸ್ವತಂತ್ರ ಭಾರತದ ಹಣಕಾಸು ಹಾಗೂ ಯೋಜನಾ ಸಂಸ್ಥೆಗಳು ತಾವೇ ಸ್ವತಃ ಪಿತೃ ಪ್ರಧಾನ ಧೋರಣೆಗಳನ್ನು ಹೊಂದಿದ್ದು ನಮ್ಮ ದೇಶೀ ಸಮುದಾಯಗಳ ಮಹಿಳಾ ವಣಿಕರ ನಿರ್ದಿಷ್ಟ ಅಗತ್ಯಗಳಿಗೆ ಹೆಚ್ಚಿನ ಕಾಳಜಿ ಹೊಂದಿಲ್ಲ. ಅಲ್ಲದೆ ಇವು ಯಾವ ಬೆಂಬಲವನ್ನು ಮಹಿಳೆಯರಿಗೆ ನೀಡುವಂತಹದ್ದಾಗಿಲ್ಲ. ಇದಕ್ಕೆ ವಿರುದ್ಧವಾಗಿ ಮಾರ್ವಾಡಿ ಪುರುಷರು ಹಾಗೂ ಉತ್ತರ ಭಾರತದ ವಣಿಕರು ದೂರ್ಣ ಬ್ಯಾಂಕಿಂಗ್ ಸೌಲಭ್ಯಗಳು, ಸಾಲದ ಅನುಕೂಲ, ಇಡೀ ಭಾರತದಲ್ಲಿ ತಮ್ಮದೇ ಜಾಲವನ್ನು ಹೊಂದಿದ್ದು ಸ್ವತಂತ್ರ ಭಾರತದಲ್ಲಿ ಸಗಟು ವ್ಯಾಪಾರ ಚಟುವಟಿಕೆಗಳನ್ನು ಆಕ್ರಮಿಸಿಕೊಂಡಿದ್ದಾರೆ.

ಜೊತೆಗೆ, ಸ್ಥಳೀಯ ಉತ್ಪಾದನೆ ಹಾಗೂ ಮಾರುಕಟ್ಟೆಗಿದ್ದ ಸೌಲಭ್ಯಗಳ ರದ್ದು, ಗುಡಿ ಕೈಗಾರಿಕೆಗಳಿಗೆ ಬಳಸಲಾಗುತ್ತಿದ್ದ

ಕಚ್ಚಾವಸ್ತುಗಳ ಸರಬರಾಜು ಸ್ಥಗಿತ - ಈ ಪ್ರದೇಶದಲ್ಲಿ ಮಹಿಳೆಯರ ಆರ್ಥಿಕ ಉತ್ಪಾದಕತೆಯನ್ನು ಯಶಸ್ವಿಯಾಗಿ ಕುಂಠಿತಗೊಳಿಸಿವೆ.

ಆದರೆ, ಸರ್ಕಾರ ಹಾಗೂ ಅಸಂಖ್ಯ ಖಾಸಗಿ ವ್ಯಕ್ತಿಗಳಿಂದ ಅಭದ್ರಗೊಳಿಸುವ ಹಲವು ಪ್ರಯತ್ನಗಳ ಮಧ್ಯೆಯೂ ಆಂತರಿಕ (ಸ್ಥಳೀಯ) ಮಾರುಕಟ್ಟೆ ಮೇಲಿನ ಮಹಿಳೆಯರ ನಿಯಂತ್ರಣ ಮುಂದುವರಿದಿದೆ. ಸ್ಥಳೀಯ ಪುಡಾರಿಗಳು, ಅಧಿಕಾರಿಗಳು ಹಾಗೂ ಭೂ ಮಾಲೀಕರ ಕುತಂತ್ರದೊಂದಿಗೆ ಸ್ಥಳೀಯರಲ್ಲದ ಮಾರ್ವಾಡಿ ಹಾಗೂ ಪಂಜಾಬಿ ವರ್ತಕರಿಗೆ ಅವಕಾಶ ಕಲ್ಪಿಸಲು ತಮ್ಮನ್ನು ದೂರದ ಸ್ಥಳಕ್ಕೆ ಸ್ಥಳಾಂತರಿಸಲು ಯೋಜನೆ ಹಾಕಿದ್ದ ಸಂದರ್ಭದಲ್ಲಿ ನಡೆದ ಎರಡು ಪ್ರಮುಖ ಘಟನೆಗಳನ್ನು ಮಹಿಳೆಯರು ಸ್ಮರಿಸುತ್ತಾರೆ.

ಹೊಸ ಭಾರತೀಯ ಆಡಳಿತ ವ್ಯವಸ್ಥೆಯಲ್ಲಿ ಮೊದಲ ಸಾರ್ವತ್ರಿಕ ಚುನಾವಣೆ ನಡೆವ ಮೊದಲು 1949-1952ರಲ್ಲಿ ಮೊದಲ ಘಟನೆ ನಡೆದಿತ್ತು. ಹಿಂದಿನ ಜಾನ್‌ಸ್ಟೋನ್ ಶಾಲಾ ಸಮುಚ್ಛಯದ ಬಳಿ ಅಸಂಖ್ಯ ಮಹಿಳೆಯರು ಕುಳಿತಿದ್ದಂತಹ ಸಂದರ್ಭದಲ್ಲಿ, ಇರುವ ಷೆಡ್ಡುಗಳನ್ನು ಕೊಡವಿ ಹೊಸ ಅಂಗಡಿ ಮಳಿಗೆಗಳನ್ನು ಕಟ್ಟಬಹುದೆಂಬ ಪ್ರಸ್ತಾವನೆ ಬಂದಿತ್ತು. ಮೊದಲ ಮಹಡಿಯಲ್ಲಿ ಬೇರೆ ಅಂಗಡಿಗಳಿಗೆ ಅವಕಾಶ ಕಲ್ಪಿಸಿ, ಕೆಳಗಡೆ ಜಾಗವನ್ನು ಪೂರ್ತಿ ಮಹಿಳೆಯರಿಗೆ ನೀಡಬಹುದೆಂಬ ಸಲಹೆ ನೀಡಲಾಗಿತ್ತು. ಆದರೆ ಪ್ರಸ್ತಾವನೆಯನ್ನು ಮಾರುಕಟ್ಟೆ ಮಹಿಳೆಯರು ಸಾರಾ ಸಗಟಾಗಿ ತಿರಸ್ಕರಿಸಿದರು. ಪೊಲೀಸರ ನೆರವಿನಿಂದ ಈ ಪ್ರದೇಶವನ್ನು ಮುತ್ತಿ ಆಕ್ರಮಿಸಿಕೊಂಡರೂ, ಅಸಂಖ್ಯ ಸಂಖ್ಯೆಯಲ್ಲಿ ಬಂದ ಮಹಿಳೆಯರು ಈ ಮುತ್ತಿಗೆಯನ್ನು ಭೇದಿಸಿ ತಮ್ಮ ಎಂದಿನ ವಹಿವಾಟು ನಡೆಸಿದರು. ಅವರಿಗೆ ರಕ್ಷಣೆ ಒದಗಿಸುತ್ತಿದ್ದ ಟೆಂಟು ಹಾಗೂ ಷೆಡ್‌ಗಳನ್ನು ನಾಶಗೊಳಿಸಲಾಯಿತು. ಇದರಿಂದ ಪಕ್ಕದ ಲಕ್ಷ್ಮೀ ಬಜಾರ್‌ನಲ್ಲಿ ಈ ಮಹಿಳೆಯರು ಕುಳಿತುಕೊಳ್ಳಬೇಕಾಯಿತು. ಆದರೂ ಎದೆಗುಂದದೆ ಹೋರಾಟ ನಡೆಸಿದರು. ಈ ಹೋರಾಟಕ್ಕೆ ಭಾರತೀಯ ಕಮ್ಯುನಿಸ್ಟ್ ಪಕ್ಷದ ದಿವಗಂತ ಬೀರಾ ತಮ್ಮ ಬೆಂಬಲ ನೀಡಿದರು. ಈ ಹೋರಾಟ ಒಂದು ವರ್ಷಕ್ಕೂ ಹೆಚ್ಚು ಕಾಲ ನಡೆಯಿತು.

ಸರದಿ ಮೇಲೆ ಮಹಿಳೆಯರು ರಾತ್ರಿ ವೇಳೆಯಲ್ಲೂ ಮಾರುಕಟ್ಟೆ ಸ್ಥಳದಲ್ಲೇ ಮಲಗುತ್ತಿದ್ದರು. ಅವರ ಹೋರಾಟದ ಬಲದ ಮುಂದೆ ವಿರೋಧಿಗಳ ದನಿ ತಗ್ಗಿ, ಈ ಮಹಿಳೆಯರಿಗೆ ನ್ಯಾಯವಾಗಿ ಸಲ್ಲಬೇಕಾದುದನ್ನು ಬಿಟ್ಟು ಕೊಡಲು ಒಪ್ಪಿಕೊಂಡರು.

ಸಾಹಸಿ ಮಹಿಳೆಯರಾದ ತಾಯೆಂಜಾವರ್ ಓಂಗ್‌ಬಿ ಅಂಗೌಬಿ, ನಾನ್‌ಗೆಮಿಕಪ್ಪಂ, ಓಂಗ್‌ವಿ ಕೇತಾಸಿ, ನೌಷೆಕ್‌ಪಮ್, ಬಂಗ್‌ವಿ ಅಮುರೈ) ನೇತೃತ್ವದಲ್ಲಿ ಈ 112 ಮಹಿಳೆಯರು ನಡೆಸಿದ ಹೋರಾಟ ನುಪಿ ಕೈಥೆಲ್ ಸೃಷ್ಟಿಯಲ್ಲಿ ಅಂತ್ಯವಾಯಿತು. ಈ ನಿರ್ದಿಷ್ಟ ಘಟನೆಯಲ್ಲಿ, ಬಂಡವಾಳಶಾಹಿಗಳ ಪರ ಹಿತಾಸಕ್ತಿಗಳ ವಿರುದ್ಧ ಕಮ್ಯುನಿಸ್ಟ್ ಪರ ಸಿದ್ಧಾಂತಗಳ ಪ್ರಭಾವವನ್ನು ಅಲ್ಲಗಳೆಯಲಾಗದು.

ಹೋರಾಟದ ಗೆಲುವಿನ ಸಂತಸ ಬಹಳ ದಿನ ಇರಲಿಲ್ಲ. ಮಹಿಳೆಯರನ್ನು ಅಭದ್ರಗೊಳಿಸಿ ಸ್ಥಳಾಂತರಿಸುವ ಶಕ್ತಿಗಳು ಸತತವಾಗಿ ಕ್ರಿಯಾಶೀಲವಾಗಿರುವುದನ್ನು ಒಂದಾದ ಮೇಲೆ ಒಂದು ಘಟನೆಗಳು ಸಾಬೀತು ಪಡಿಸಿದವು.

ಎರಡನೇ ಪ್ರಮುಖ ಘಟನೆ ನಡೆದಿದ್ದು 90ರ ದಶಕದ ಆರಂಭದಲ್ಲಿ. ಮಾರುಕಟ್ಟೆಯ ಮೂರು ಮುಖ್ಯ ವಿಭಾಗಗಳು ಹಾಗೂ ನೆರೆಯ ಪ್ರದೇಶಗಳಲ್ಲಿನ ನುಪಿಕೈಥೆಲ್ ಮಹಿಳೆಯರಿಗೆ ತೆರವಿನ ನೋಟಿಸ್ ನೀಡಲಾಯಿತು. ಅವರಿಗೆ ಹೊಸ ಸ್ಥಳ ಲ್ಯಾಂಫೆಲ್‌ಪಟಗೆ ಸ್ಥಲಾಂತರಗೊಳ್ಳಬೇಕೆಂದು ಹೇಳಲಾಯಿತು. ಈ ವ್ಯವಸ್ಥೆಗೆ ಒಪ್ಪುವುದೆಂದರೆ ವಹಿವಾಟಿನಲ್ಲಿ ಪೂರ್ಣ ನಷ್ಟ ಮಾಡಿಕೊಳ್ಳುವುದು ಎಂದೇ ಅರ್ಥ. ಇದಕ್ಕೂ ಮಹಿಳೆಯರು ಪ್ರತಿರೋಧ ತೋರಿದರು. ತಮ್ಮ ಕುಟುಂಬಗಳಿಗೆ ಆರ್ಥಿಕ ಶಕ್ತಿ ನೀಡುವ ತಮ್ಮ ಪಾತ್ರವನ್ನು ರಕ್ಷಿಸಿಕೊಂಡ ಈ ಮಹಿಳೆಯರ ಸಾಹಸಕ್ಕೆ ಎಲ್ಲಾ ಕೀರ್ತಿಯೂ ಸಲ್ಲಬೇಕು.

ಈ ಎಲ್ಲಾ ಇತ್ಯಾತ್ಮಕ ಪ್ರಚಾರ, ಉತ್ಸಾಹ ಹಾಗೂ ಗೌಜು ಗದ್ದಲಗಳ ಮಧ್ಯೆ ಈಗಲೂ "ಕೈಥೆಲ್ ನೂಪಿ" ಚಿಂತೆಗಳಿಂದ ಮುಕ್ತವಾಗಿಲ್ಲ.

ಈಗ ಹೆಚ್ಚು ನೋವು ಉಂಟು ಮಾಡುವ ಸಂಗತಿ ಎಂದರೆ, ರಾಜ್ಯದ ಉದ್ದೇಶಪೂರ್ವಕ ನೀತಿಯಿಂದ ಈ ಮಹಿಳೆಯರು ಈಗ ನಿರ್ಲಕ್ಷಿತ, ಅನಾರೋಗ್ಯಕರ ಸ್ಥಳಗಳಲ್ಲಿದ್ದಾರೆ. ಇಂಫಾಲದ ಮುನಿಸಿಪಲ್ ಮಂಡಳಿ, ನಾಗರಿಕ ಸೌಲಭ್ಯಗಳನ್ನು ತನ್ನ ಹೊಣೆಗಾರಿಕೆಯಲ್ಲಿ ವಿಫಲಗೊಂಡಿದೆ. ವಾರ್ಷಿಕ ಪ್ರವಾಹ ಕಾಲದಲ್ಲಿ ಈ ಮಹಿಳೆಯರು ತಮ್ಮದೇ ಬಲಪ್ರದರ್ಶನದಿಂದ ಅಸ್ತಿತ್ವ ಉಳಿಸಿಕೊಳ್ಳಬೇಕು. ಇದರ ಜೊತೆಗೆ ಮಾರುಕಟ್ಟೆ ಪ್ರದೇಶವನ್ನು ತೆರಿಗೆ ವ್ಯಾಪ್ತಿಗೆ ತರಲಾಗಿದ್ದು, ಬಾಡಿಗೆ ದರವನ್ನು

ತಲಾ ಮಹಿಳೆಗೆ ವಾರ್ಷಿಕ 6 ರೂಪಾಯಿಗಳಿಂದ, ತಲಾ ಮಹಿಳೆಗೆ ಮಾಸಿಕ 7 ರೂಪಾಯಿಗೆ ಏರಿಸಲಾಗಿದೆ. ಇದು ಈ ಮಹಿಳೆಯರ ಶೆಂಗಾವೊ (ಪರ್ಸ್) ತೂತು ಮಾಡುವಂತಹದ್ದು.

ಈ ಪ್ರದೇಶದ ಅರ್ಥ ವ್ಯವಸ್ಥೆಯ ಸಮಸ್ಯೆಗಳು 'ಕೈತೆಲ್ ನೂಪಿ'ಯ ಅಬಲೀಕರಣ ಹಾಗೂ ಶಕ್ತಿಗುಂದುವಿಕೆಯೊಂದಿಗೇ ಬೆಳೆಯುತ್ತಿವೆ. ಆಧುನೀಕರಣ ಹಾಗೂ ಅಭಿವೃದ್ಧಿಯ ಹೆಸರಿನಲ್ಲಿ ಈಶಾನ್ಯ ಪ್ರದೇಶದ ಸ್ಥಳೀಯ ಜನರ ಹಾಗೂ ವಿಶೇಷವಾಗಿ ಮಹಿಳೆಯರ ಹಿತದತ್ತ ನಿರ್ಲಕ್ಷ್ಯ ತೋರಿದೆ. ಇದು ನಮ್ಮ ನೆರೆಯ ಆಗ್ನೇಯ ಏಷ್ಯಾ ರಾಷ್ಟ್ರಗಳ ಮಾದರಿಗೆ ತದ್ವಿರುದ್ಧವಾಗಿದೆ. ಈ ರಾಷ್ಟ್ರಗಳಲ್ಲಿ ತಮ್ಮೆಲ್ಲಾ ಪ್ರಯೋಗಗಳ ಮಧ್ಯೆಯೂ, ತಮ್ಮ ಸಾಂಸ್ಕೃತಿಕ ಪರಂಪರೆಯ ಅಂತರ್ಗತ ಭಾಗವಾಗಿರುವ, ಪರಂಪರೆಯ ವಲಯಗಳಲ್ಲಿ ಮಹಿಳೆಯರ ಆರ್ಥಿಕ ಪಾಲುದಾರಿಕೆಯನ್ನು ಸಂರಕ್ಷಿಸಿ ಉತ್ತೇಜನ ನೀಡಿರುವುದನ್ನು ಇಲ್ಲಿ ಸ್ಮರಿಸಬಹುದು.

(ಬಿಹಾರದ ರಾಂಚಿಯಲ್ಲಿ 1997ರ ಡಿಸೆಂಬರ್ 20ರಿಂದ 30ರವರೆಗೆ ನಡೆದ 6ನೇ ರಾಷ್ಟ್ರೀಯ ಮಹಿಳಾ ಚಳುವಳಿಗಳ ಸಮ್ಮೇಳನದಲ್ಲಿ ಈಶಾನ್ಯ ಭಾರತದ ಸ್ಥಳೀಯ ಮಹಿಳೆಯರ ಜಂಟಿ ವೇದಿಕೆ ಮಂಡಿಸಿದ ಹೇಳಿಕೆಯ ಒಂದು ಭಾಗ).

# ಪಂಜು ಹಿಡಿದು ತಮ್ಮ ಹಕ್ಕಿಗಾಗಿ ಹೋರಾಡಿದ ಲೈಂಗಿಕ ಮಹಿಳಾ ಕಾರ್ಮಿಕರು

ಮೇ 1-ರ ಕಾರ್ಮಿಕರ ದಿನಾಚರಣೆಯ ದಿನದಂದು ಕಲ್ಕತ್ತಾದ 'ಲೈಂಗಿಕ ಕಾರ್ಮಿಕರು' ಧೈರ್ಯವಾಗಿ ಹೊರಗೆ ಬಂದು, ಪಂಜು ಮೆರವಣಿಗೆ ಮಾಡಿ ತಮ್ಮ ಹಲವಾರು ಬೇಡಿಕೆಗಳಿಗಾಗಿ ಹೋರಾಡಿದ್ದು ಅವರಿಟ್ಟ ಸಾಹಸದ ಹೆಜ್ಜೆಯಾಗಿದೆ. ಈ ಬೇಡಿಕೆಗಳಲ್ಲಿ ಮುಖ್ಯವಾದದ್ದು ಈ ಉದ್ಯೋಗದಲ್ಲಿ ತೊಡಗಿರುವವರ ಬಗ್ಗೆಗಿನ ಕೆಟ್ಟ ಭಾವನೆಯ ಸ್ಥಿತಿ ತೊಲಗುವುದು. ಈ ಸಮಾಜ ಲೈಂಗಿಕ ಕಾರ್ಮಿಕಳನ್ನು ಅಸಹ್ಯ ಹಾಗೂ ಅಸ್ಪೃಶ್ಯ ಭಾವನೆಯಿಂದ ನೋಡುತ್ತದೆ. ಆಕೆಯೇ ಈ ಆಕೆಯ ಸ್ಥಿತಿಗೆ ಕಾರಣವೆಂದು ಭಾವಿಸುತ್ತದೆ. ಈ ಸ್ಥಿತಿ ತೊಲಗಬೇಕೆಂಬುದು ಲೈಂಗಿಕ ಕಾರ್ಮಿಕರ ಮುಖ್ಯ ಬೇಡಿಕೆಗಳಲ್ಲೊಂದಾಗಿತ್ತು. ಕಾನೂನಿನ ಮೂಲಕ ಇವರ ಮೇಲೆ ನಡೆಯುತ್ತಿರುವ ಶೋಷಣೆ ಕೊನೆಗಾಣಬೇಕೆಂಬುದೂ ಇವರ ಬೇಡಿಕೆಯಾಗಿತ್ತು. ಇವರ ಮಾನವ ಹಕ್ಕು, ನಾಗರಿಕ ಸ್ವಾತಂತ್ರ್ಯ ಗುರುತಿಸಬೇಕು ಎಂಬುದರ ಜೊತೆಗೆ ಇವರ ಸೇವೆಯನ್ನು ಕಾನೂನುಬದ್ಧ ಎಂದು ಗುರುತಿಸಬೇಕು ಎಂಬುದೂ ಕೂಡಾ ಇವರಿಟ್ಟ ಬೇಡಿಕೆಗಳಲ್ಲಿ ಮುಖ್ಯವಾಗಿದ್ದವು.

ಮೇ ದಿನದಂದು ಕಲ್ಕತ್ತಾದ ಕಾಲಿಘಟ್ ಹಾಗೂ ಬೋ ಬಜಾರ್‌ನಲ್ಲಿ ಈ ಕಾರ್ಮಿಕರ ಪಂಜು ಮೆರವಣಿಗೆ ನಡೆಯಿತು. ಮಧ್ಯರಾತ್ರಿಯಲ್ಲಿ ನಡೆದ ಈ ಮೆರವಣಿಗೆ, ಅವರ ಕೂಗು-ಈ ದೇಶದ ಜನರಲ್ಲಿ 'ಪ್ರಜ್ಞೆ' ಎನ್ನುವಂತದೇನಾದರೂ ಇದ್ದರೆ ಅದನ್ನು ತಟ್ಟುವಂತಹದ್ದಾಗಿತ್ತು.

ತಮ್ಮ ಉದ್ಯೋಗಕ್ಕೆ ಅಂಟಿಕೊಂಡಿರುವ 'ಶೇಮ್'-ನಿಂದ ಈಚೆ ಬಂದು, ತಮ್ಮ ಹೆಸರಿಗೆ ಅಂಟಿಕೊಂಡಿರುವ 'ಸೂಳೆ' ಎಂಬ ನಾಚಿಕೆಯಿಂದ ಈಚೆ ಬಂದು ಇವರು ಸಾಮಾಜಿಕ ಕಾರ್ಯಕರ್ತೆಯರ ಚಿತ್ರದಲ್ಲಿ ಬೀದಿಗಿಳಿದಿದ್ದು ಇವರ ಹೋರಾಟದ ಒಂದು ವೈಶಿಷ್ಟ್ಯವಾಗಿತ್ತು. ಇವರ ಉದ್ಯೋಗಕ್ಕೆ ಅಂಟಿಕೊಂಡಿರುವ ಲಜ್ಜೆಯನ್ನು ಬದಿಗಿಟ್ಟು ಸಾಮಾಜಿಕ ಕಾರ್ಯಕರ್ತೆಯರ ಘನತೆಯಲ್ಲಿ ಇವರು ನಡೆಸಿದ ಹೋರಾಟವನ್ನು ಈ ಸಮಾಜ ಹೇಗೆ ಸ್ವೀಕರಿಸೀತು ಎಂಬುದೂ ಪ್ರಶ್ನೆಯೇ.

ಭಾರತ ದೇಶದ 40,000 ಲೈಂಗಿಕ ಕಾರ್ಮಿಕರ ವೇದಿಕೆಯಿಂದ 'ದರ್ಭಾರ್ ಮಹಿಳಾ ಸಮನ್ವಯ ಕಮಿಟಿ'ಯ ಸೆಕ್ರೆಟರಿ ಸಾಧನಾ ಮುಖರ್ಜಿ. ಇವರ ಮಾತಿನಲ್ಲಿ ಹೇಳಬೇಕೆಂದರೆ 5-10 ರೂಪಾಯಿಗಳಿಗೆ ಲೈಂಗಿಕ ಕಾರ್ಮಿಕರನ್ನು ಕೊಳ್ಳುವ ಇವರು ತಮ್ಮ ಸಾಮಾಜಿಕ ಮರ್ಯಾದೆ, ಘನತೆಯನ್ನು ಕಾಯ್ದುಕೊಂಡೇ ಇರುತ್ತಾರೆ. ಅಂತವರಿಗೆ ಇಂತಹ ಬೇಡಿಕೆಗಳು ವಿಡಂಬನಾತ್ಮಕವಾಗಿ ಕಾಣುತ್ತವೆ.

ಹಾಸಿಗೆಯಡಿಯಲ್ಲಿ ಅಡಗಿಕೊಳ್ಳುವುದರಿಂದ ನಮಗೇನು ಸಿಗುತ್ತದೆ? ನಿರಂತರ ಬಯ್ಗಳು ಹಾಗೂ ಶೋಷಣೆ. ಈ ರೀತಿಯಾಗಿ ಹೊರಗೆ ಬಂದು ಬೇಡಿಕೆಯಿಡುವುದರಿಂದ ತಮ್ಮ ಮಕ್ಕಳಿಗೆ ಒಳ್ಳೆಯ ಓದು, ಕೆಲಸ, ದೊರೆತು ಅವರು ತಮ್ಮಂತೆ ಆಗುವುದು ತಪ್ಪೆಂದು ಇವರು ಭಾವಿಸುತ್ತಾರೆ.

ಮೂಲ : *ಡೆಕನ್ ಹೆರಾಲ್ಡ್*

# 6ನೇ ಮಹಿಳಾ ಚಳುವಳಿಗಳ ಸಮಾವೇಶದಲ್ಲಿ ಸಲಹಿಸಲ್ಪಟ್ಟ ನಿರ್ಣಾಯಕಗಳು

**ರಾಜ್ಯ ಮತ್ತು ಜನಸಂಖ್ಯಾ ಪಾಲಿಸಿ**

ಸರ್ಕಾರದ ಮಹಿಳಾ ವಿರೋಧಿ ನೀತಿ : ರಾಜ್ಯದ ಜನಸಂಖ್ಯಾ ಪಾಲಿಸಿಯನ್ನು ಖಂಡಿಸುದುದಲ್ಲದೆ ಮತ್ತೊಮ್ಮೆ ಅದರ ವಿರುದ್ಧ ಹೋರಾಟ ನಡೆಸಲು ಕರೆ ನೀಡಲಾಯ್ತು. ನಿರ್ದಿಷ್ಟವಾಗಿ ಮಹಿಳೆಯರ ಆರೋಗ್ಯದ ಅಗತ್ಯಗಳನ್ನು ಪರಿಗಣಿಸುವ ಆರೋಗ್ಯ ನೀತಿಯ ತುರ್ತು ಅಗತ್ಯವಿದೆ ಎಂದು ತೀರ್ಮಾನಿಸಲಾಯ್ತು.

ಸೂಕ್ಷ್ಮವಾದ, ಅರಿವು ಮೂಡಿಸುವ ಆರೋಗ್ಯ ಕಾರ್ಯಕ್ರಮಗಳ ಅವಶ್ಯಕತೆಯಿದೆ. ಅನೀತಿಯುಕ್ತ ವೈದ್ಯಕೀಯ ಸಂಶೋಧನೆಗಳನ್ನು ತಕ್ಷಣವೇ ನಿಲ್ಲಿಸಬೇಕು. ಸಂಶೋಧನೆಗಳನ್ನು ಮಹಿಳಾ ಪರವಾಗಿ ಮರು ಅನುಗೊಳಸಬೇಕು.

**ರಾಜ್ಯದ ದಮನಕಾರಿ ಗುಣ**

1. ಜನರ ನ್ಯಾಯಯುತ ಮತ್ತು ಪ್ರಜಾಸತ್ತಾತ್ಮಕ ಬೇಡಿಕೆಗಳಿಗಾಗಿ ಹೋರಾಡುತ್ತಿರುವ ಚಳುವಳಿಗಳ ಮೇಲೆ ರಾಜ್ಯದ ದಮನಕಾರಿ ಆಕ್ರಮಣವನ್ನು ಖಂಡಿಸುತ್ತೇವೆ; ವಿರೋಧಿಸುತ್ತೇವೆ. ಕಾಶ್ಮೀರ ಮತ್ತು ಈಶಾನ್ಯ ಭಾರತದ ವಿವಿಧ ರಾಷ್ಟ್ರೀಯತೆಗಳ ಹೋರಾಟಗಳ ಮೇಲೆ ಆಂಧ್ರ ಪ್ರದೇಶ, ದಂಡಕಾರಣ್ಯ ಮತ್ತು ಬಿಹಾರ್‌ನಲ್ಲಿ ರೈತರ ಕ್ರಾಂತಿಕಾರಿ ಚಳುವಳಿಗಳ ಮೇಲೆ ಮಿಲಿಟರಿ, ಅರೆ ಮಿಲಿಟರಿ ಮತ್ತು ಪೋಲಿಸರ ಆಕ್ರಮಣ ಹೆಚ್ಚುತ್ತಿದೆ. ಎಲ್ಲ ರೀತಿಯ ಪ್ರಜಾಸತ್ತಾತ್ಮಕ ವಿರೋಧಗಳು ಸರ್ಕಾರದ ಆಕ್ರಮಣಕ್ಕೆ ಗುರಿಯಾಗುತ್ತಿವೆ.

2. ಶೋಷಣೆಯನ್ನು ವಿರೋಧಿಸುತ್ತಿರುವ ಮತ್ತು ನೆಲ, ಕಾಡು, ನೈಸರ್ಗಿಕ ಸಂಪನ್ಮೂಲಗಳ ಮೇಲಿನ ಹಕ್ಕುಗಳಿಗಾಗಿ ಸಂಘಟಿಸುತ್ತಿರುವ, ಹೋರಾಡುತ್ತಿರುವ ಆದಿವಾಸಿ ಚಳುವಳಿಗಳನ್ನು ಅಮಾನುಷವಾಗಿ ಹತ್ತಿಕ್ಕಲಾಗುತ್ತಿದೆ. ಮಧ್ಯಪ್ರದೇಶದ ಖರ್‌ಗೋನ್‌ನ ಆದಿವಾಸಿ ಮುಕ್ತಿ ಸಂಘಟನಾದ ಪ್ರಜಾಸತ್ತಾತ್ಮಕ ಹೋರಾಟ ಸರ್ಕಾರಿ ಪ್ರಾಯೋಜಿತ ಹಿಂಸೆಯನ್ನು ಎದುರಿಸಬೇಕಾಯ್ತು. ಆ ಸಂದರ್ಭದಲ್ಲಿ ಮಹಿಳೆಯರ ಮೇಲೆ ಅತ್ಯಾಚಾರವೆಸಗಲಾಯ್ತು ಮತ್ತು ಅವರುಗಳ ಮನೆಗಳನ್ನು ನಾಶಪಡಿಸಲಾಯ್ತು. ತಮಿಳುನಾಡಿನ ಇರುಳ ಮಹಿಳಾ ಅಭಿವೃದ್ಧಿ ಸೊಸೈಟಿಯು ಪೋಲಿಸರಿಂದ ಅನೇಕ ರೀತಿಯ ಹಿಂಸೆಯನ್ನು ಎದುರಿಸಿತು.

ಆದಿವಾಸಿ ಹಳ್ಳಿಗಳ ಹೋರಾಟಗಳನ್ನು ಹತ್ತಿಕ್ಕಿ, ನಿರ್ದಿಷ್ಟವಾಗಿ ಮಹಿಳೆಯರನ್ನೆ ಗುರಿಯಾಗಿಸಿಕೊಳ್ಳಲು ಪೋಲಿಸ್ ಬಲವನ್ನು ಉಪಯೋಗಿಸಿಕೊಳ್ಳುವುದನ್ನು ನಾವು ಖಂಡಿಸುತ್ತೇವೆ.

3. ಆಂಧ್ರ ಪ್ರದೇಶದಲ್ಲಿ ವಿಶೇಷವಾಗಿ ತೆಲಂಗಾಣ ಪ್ರದೇಶ ಮತ್ತು ದಂಡಕಾರಣ್ಯದಲ್ಲಿ ಎನ್‌ಕೌಂಟರ್ ಹತ್ಯೆಗಳು, ರಾಜಕೀಯ ಕಾರ್ಯಕರ್ತರ ಅವರ ಬೆಂಬಲಿಗರ ಕಾನೂನುಬಾಹಿರ ಬಂಧನಗಳ ಕಥೆ ಮುಂದುವರೆಯುತ್ತಲೇ ಇದೆ. ನಕ್ಸಲೈಟರನ್ನು ಮುಗಿಸಲು 'ಹುಡುಕಾಟ ಕಾರ್ಯಾಚರಣೆಯ' ಹೆಸರಿನಲ್ಲಿ ತೆಲಂಗಣದಲ್ಲಿನ ಮಹಿಳೆಯರ ಮೇಲೆ ದೌರ್ಜನ್ಯ, ಕಿರುಕುಳ, ಹತ್ಯೆ ನಡೆಯುತ್ತಿದೆ.

4. ಮಧ್ಯ ಬಿಹಾರದಲ್ಲಿ ಬಿ.ಜೆ.ಪಿ. - ಆರ್.ಜೆ.ಡಿ. (ರಾಷ್ಟ್ರೀಯ ಜನತಾದಳ) ಪ್ರೋತ್ಸಾಹಿತ ಮತ್ತು ರಾಜ್ಯ ಪೋಲಿಸ್ ಆಡಳಿತದ ರಕ್ಷಣೆ ಹೊಂದಿರುವ ರಣವೀರ ಸೇನೆಯ ಡಿಸೆಂಬರ್ 1, 1997ರಂದು ಲಕ್ಷ್ಮಣ್‌ಪುರ್ ಬಾಥೆ ಗ್ರಾಮದಲ್ಲಿ ಮಹಿಳೆ ಮತ್ತು ಮಕ್ಕಳನ್ನೊಳಗೊಂಡಂತೆ 62 ಜನರ ಮೇಲೆ ಭೀಕರ ಹತ್ಯೆ ನಡೆಸಿತು.

ರಣಭೀರ ಸೇನೆ ಗುಂಡಾಗಳು, ಆರ್.ಜೆ.ಡಿ., ಬಿ.ಜೆ.ಪಿ. ಮತ್ತು ಆಡಳಿತದಲ್ಲಿರುವವರ ಪ್ರೋತ್ಸಾಹಕರು, ರಕ್ಷಕರಿಗೆ ಶಿಕ್ಷೆ ನೀಡಲು ಒತ್ತಾಯಿಸುತ್ತೇವೆ. ಆ ಪ್ರದೇಶದಲ್ಲಿ ರೈತ ಚಳುವಳಿಯನ್ನು ಹತ್ತಿಕ್ಕಲು ಮತ್ತು ಸೇನೆಯನ್ನು ರಕ್ಷಿಸಲು ನಿಯೋಜಿಸಿರುವ ಹೆಚ್ಚಿನ ಅರೆ ಮಿಲಿಟರಿ ಪಡೆಗಳನ್ನು ಹಿಂತೆಗೆದುಕೊಳ್ಳಲು ಕೋರುತ್ತೇವೆ.

5. ಸ್ಥಳೀಯ ಚಳುವಳಿಗಳನ್ನು ಹತ್ತಿಕ್ಕಲು ಮಿಲಿಟರಿ ಆಡಳಿತವನ್ನು ಈಶಾನ್ಯ ಭಾರತದಲ್ಲಿ ನಡೆಸಲಾಗುತ್ತಿದೆ. ಹಳ್ಳಿ ಮತ್ತು ಪಟ್ಟಣವಾದ ಕೇಂದ್ರ ಪ್ರದೇಶದಲ್ಲಿ ಮಿಲಿಟರಿ ಪಡೆಗಳನ್ನು ಸ್ಥಾಪಿಸಲಾಗಿದೆ. ಇದರಿಂದಾಗಿ ವಿಶೇಷವಾಗಿ ಮಹಿಳೆಯರ ಜೀವನವೂ

ದಾರುಣವಾಗುತ್ತಿದೆ, Vulvarable ಆಗುತ್ತಿವೆ. ಇತ್ತೀಚೆಗೆ ಅಸ್ಸಾಂನ ನಾಗರೀಕ ಹಕ್ಕುಗಳ ಸಂಸ್ಥೆ, MASS ಸಂಸ್ಥೆಗಳು ಮಿಲಿಟರಿ ಹಿಂಸೆಗೆ ಗುರಿಯಾಗಿ, ಸುಳ್ಳು ಆಪಾದನೆಗಳ ಮೇಲೆ ಆರೋಪಿಸಲ್ಪಟ್ಟವು.

ಈ ಪ್ರದೇಶಗಳಿಂದ ನಿರ್ದಿಷ್ಟವಾಗಿ ಹಳ್ಳಿ ಪಟ್ಟಣಗಳ ಕೇಂದ್ರ ಪ್ರದೇಶದಿಂದ ಮಿಲಿಟರಿ ಪಡೆಗಳನ್ನು ತಕ್ಷಣವೇ ಹಿಂತೆಗೆದುಕೊಳ್ಳಬೇಕೆಂದು ಕೇಳುತ್ತೇವೆ. ನಾಗರೀಕ ಹಕ್ಕುಗಳ ಹೋರಾಟಗಾರರನ್ನು ಬಲಿಪಶುವಾಗಿರಿಸುವುದನ್ನು ಖಂಡಿಸುತ್ತೇವೆ. ನಾಗಾ ಜನರ ಹೋರಾಟದಿಂದಾಗಿ ನಾಗಾಲ್ಯಾಂಡಿನಲ್ಲಿ ಕದನ ವಿರಾಮವು ಏರ್ಪಟ್ಟಿರುವುದನ್ನು ನಾವು ಸುಸ್ವಾಗತಿಸುತ್ತೇವೆ.

ಈಶಾನ್ಯ ಭಾರತದಲ್ಲಿ ಮಹಿಳೆಯರ ಮೇಲೆ ದೌರ್ಜನ್ಯದ ಪ್ರಕರಣಗಳನ್ನು ಸ್ವತಂತ್ರ ವಿಚಾರಣೆಗೊಳಪಡಿಸುವಂತೆ ಹಾಗು ಅಪರಾಧಿಗಳಿಗೆ ಶಿಕ್ಷೆ ವಿಧಿಸಬೇಕೆಂದು ಕೇಳುತ್ತೇವೆ.

ಪ್ರಜಾಸತ್ತಾತ್ಮಕವಾದ ಚಳುವಳಿಗಳನ್ನು ಹತ್ತಿಕ್ಕುವ, ರಾಜಕೀಯ ಕಾರ್ಯಕರ್ತ ಸಂವಿಧಾನಾತ್ಮಕ ಹಕ್ಕುಗಳನ್ನು ನಿರಾಕರಿಸುವಂತಹ ಟಾಡ (TADA) ನಾಸಾ (NASA) ಎಪಿ (A.P.)ಯಂತಹ ಸಾರ್ವಜನಿಕ ರಕ್ಷಣಾ ಕಾಯ್ದೆಗಳ ಉಪಯೋಗವನ್ನು ನಾವು ಖಂಡಿಸುತ್ತೇವೆ. ಇತ್ತೀಚೆಗೆ ಸಂವಿಧಾನೀಯ ಬೆಂಚ್, ಸಶಸ್ತ್ರ ಪಡೆಗಳ ವಿಶೇಷ ಅಧಿಕಾರ ಕಾಯ್ದೆಯನ್ನು ಎತ್ತಿ ಹಿಡಿಯಿತು. ಅವರ ಸಿಂಧುತ್ವವನ್ನು ಪ್ರಶ್ನಿಸಿ ದಾವೆ ಹೂಡಿದ 15 ವರ್ಷಗಳ ನಂತರ!

ಎಲ್ಲ ದಮನಕಾರಿ, ಪ್ರಜಾಸತ್ತಾತ್ಮಕ ವಿರೋಧಿ ಕಾನೂನುಗಳು ನಿರ್ದಿಷ್ಟವಾಗಿ ಸಶಸ್ತ್ರ ಪಡೆಗಳ ವಿಶೇಷ ಅಧಿಕಾರ ಕಾಯ್ದೆಯನ್ನು ರದ್ದುಪಡಿಸಬೇಕೆಂದು ಕೇಳುತ್ತೇವೆ.

7. ಸರಳ ವಿರೋಧಗಳಿಗೂ ಸಹ ರಾಜ್ಯದ ಪ್ರತಿಕ್ರಿಯೆಯನ್ನು ಗಮನಿಸಿದಾಗ ರಾಜ್ಯದ ದಮನಕಾರಿ ಗುಣ ಮತ್ತು ಪ್ರಜಾಸತ್ತಾತ್ಮಕ ಸ್ವಾತಂತ್ರ್ಯ ಸವೆದು ಹೋಗುತ್ತಿರುವುದು ಖಾತ್ರಿಯಾಗುತ್ತದೆ. ಬಹುರಾಷ್ಟ್ರೀಯ ಸಂಸ್ಥೆಗಳ ಸೇವೆಗಾಗಿ ಮಹಿಳೆಯನ್ನು ಸರಕಾಗಿಸುವ ವಿಶ್ವಸುಂದರಿ ಸ್ಪರ್ಧೆಯ ವಿರುದ್ಧ ಮಹಿಳಾ ಸಂಘಟನೆಗಳ ಪ್ರತಿಭಟನೆಗಳ ಅಲೆ ಎದ್ದಾಗ ಇಡೀ ಕರ್ನಾಟಕ ಅದರಲ್ಲೂ ಬೆಂಗಳೂರು ನಗರ ಪ್ರತಿಭಟನೆಗಳ ಅಲೆ ಎದ್ದಾಗ ಇಡೀ ಕರ್ನಾಟಕ ಅದರಲ್ಲೂ ಬೆಂಗಳೂರು ನಗರ ಪೋಲಿಸ್ ರಾಜ್ಯವಾಗಿ ಪರಿವರ್ತಿತವಾಯಿತು. ಅದನ್ನು ನಾವು ಖಂಡಿಸುತ್ತೇವೆ.

**ಮಹಿಳೆಯರ ಮೇಲೆ ಹೆಚ್ಚುತ್ತಿರುವ ಕ್ರೌರ್ಯ**

**ಕೌಟುಂಬಿಕ ಕಾರ್ಯ**

1. ಅತ್ಯಾಚಾರ ಅಥವಾ ಅತ್ಯಾಚಾರದ ಪ್ರಯತ್ನದ ಸಂದರ್ಭದಲ್ಲಿ, ಒಬ್ಬ ಗಂಡಸು ಸ್ವಭಾವತಃ ಅತ್ಯಾಚಾರಿಯೇ ಅಥವಾ ಅಲ್ಲವೆ ಎಂಬುದು ಯಾವುದೇ ಕಾನೂನಿನ ವಾದಕ್ಕೆ ಆಧಾರವಲ್ಲ. ಅದು ಅವನ ಮೊದಲನೇ ಅಪರಾಧವಾದರೂ ಅವನನ್ನು ಪಿ.ಡಿ. ಆಕ್ಟ್ ಅಡಿಯಲ್ಲಿ ಬಂಧಿಸಬೇಕು. ಈ ನಿರ್ಣಯವನ್ನು 1996 ಡಿಸೆಂಬರ್‌ನಲ್ಲಿ ವಿಶಾಖಪಟ್ಟಣದಲ್ಲಿ 16 ವರ್ಷದ ಬಾಲಕಿಯೊಬ್ಬಳ ಮೇಲೆ ನಡೆದ ಅತ್ಯಾಚಾರಕ್ಕೆ ಸಂಬಂಧಪಟ್ಟಂತೆ ತೆಗೆದುಕೊಳ್ಳಲಾಗಿದೆ.

2. ಮಹಿಳಾ ಮುಖ್ಯಸ್ಥರಿರುವ ಸರ್ಕಾರೇತರ ಸಂಸ್ಥೆಗಳಲ್ಲಿ ಅಥವಾ ಆ ಸಂಸ್ಥೆಗಳಲ್ಲಿ ಮಹಿಳೆಯರ ಕೆಲಸವನ್ನು ಗಮನಿಸಲೂ ಸಹ ವಿದೇಶಿ ಅನುದಾನ ಸಂಸ್ಥೆಗಳು ಪುರುಷರನ್ನು ನೇಮಿಸಬಾರದು.

3. 1997ರಲ್ಲಿ IGSSSನ ಪ್ರತಿನಿಧಿ ನಳಿನಿ ಕಾಮತ್ ಸುಮನ್ ಎಂಬುವನು ಪಟ್ನಾದ ಮಹಿಳಾ ಜಾಗರಣ್ ಕೇಂದ್ರದ ಕಾರ್ಯದರ್ಶಿ ನೀಲು ಎಂಬುವರ ಮೇಲೆ ದೈಹಿಕ, ಲೈಂಗಿಕ ಆಕ್ರಮಣ ನಡೆಸಿದ. ಬೃಹತ್ ಪ್ರತಿಭಟನೆಯಾದರೂ ದೆಹಲಿಯ IGSSS ಇನ್ನು ಅವನು ನೀಡಿದ ರಾಜಿನಾಮೆ ಪತ್ರವನ್ನು ಒಪ್ಪಿಕೊಂಡಿಲ್ಲ. ಆ ಕುರಿತು IGSSS ಸುಮನ್ ವಿರುದ್ಧ ಕ್ರಮ ತೆಗೆದುಕೊಳ್ಳಬೇಕು.

**ಮದುವೆಯಾಗದ ತಾಯಂದಿರು (ಬೇಡಿಕೆಗಳು)**

1. ಶೇ. 50ರಷ್ಟಾದರೂ ಜಾತಿ ಪಂಚಾಯತಿಗಳಲ್ಲಿ ಮಹಿಳೆಯರಿರಬೇಕು. ಇದರಿಂದಾಗಿ ಸಾಮಾಜಿಕವಾಗಿ ದುರ್ಬಲರಾದ (Vulnerable) ಮಹಿಳೆಯರು ಎಲ್ಲಾ ರೀತಿ ಅಪಮಾನಗೊಳ್ಳದಿರುವುದನ್ನು ಖಾತ್ರಿ ಪಡಿಸುತ್ತದೆ.

2. ಮಹಿಳೆಯರು ಗ್ರಾಮಪಂಚಾಯ್ತಿಗಳ ಭಾಗವೂ ಆಗಬೇಕು.

3. ಮಹಿಳಾ ಪಂಚಾಯ್ತಿಗಳನ್ನೂ ಸಹ ರೂಪಿಸಬೇಕು.

4. ಮಹಿಳಾ ನ್ಯಾಯಾಲಯ ಮತ್ತು ಪೋಲಿಸ್ ಠಾಣೆಗಳನ್ನು ಎಲ್ಲಾ ಜಿಲ್ಲೆಗಳಲ್ಲಿ ಪ್ರಾರಂಭಿಸಬೇಕು.

**ಸ್ಥಳಾಂತರ**

ಬೃಹತ್ ಪವರ್ ಪ್ರಾಜೆಕ್ಟುಗಳನ್ನೊಳಗೊಂಡಿರುವ ಇಂದಿನ ಅಭಿವೃದ್ಧಿ ಮಾದರಿಗಳು ಆದಿವಾಸಿ ಜನಕ ಸ್ಥಳಾಂತರಕ್ಕೆ ಕಾರಣವಾಗಿವೆ. ಈ ಅಭಿವೃದ್ಧಿ ಮಾದರಿಗಳನ್ನು ತೆಗೆಯಬೇಕೆಂದು ಸಭೆಯು ತೀರ್ಮಾನಿಸಿತು.

ನಗರಗಳನ್ನು ಸುಂದರಗೊಳಿಸುವ ಹೆಸರಿನಲ್ಲಿ ನಗರ ಅಭಿವೃದ್ಧಿ ನೀತಿಗಳು ನಗರದ ಬಡವರನ್ನು ಎತ್ತಂಗಡಿ ಮಾಡುತ್ತಿವೆ. ಇದು ನಿಲ್ಲಬೇಕು. ಬದಲಿಗೆ ಬಹುಜನರ ಜೀವನಸ್ಥಿತಿ ಸುಧಾರಣೆಯ ನಿಟ್ಟಿನಲ್ಲಿ ಸಾರ್ವಜನಿಕ ಸೌಲಭ್ಯಗಲನ್ನು ಬೆಳೆಸುವುದಕ್ಕೆ ಒತ್ತು ನೀಡಬೇಕು.

ಸ್ಲಂ ನಿವಾಸಿಗಳಿಗೆ ಭೂಮಿ ಹಕ್ಕುಗಳನ್ನು ನೀಡಬೇಕು. ಅರೆಮನಸ್ಸಿನ ಸ್ಲಂ ಅಭಿವೃದ್ಧಿ ಯೋಜನೆಗಳು ಕಾಂಟ್ರಕ್ಟರುಗಳು, ಕಟ್ಟಡ ನಿರ್ಮಿಸುವವರ ಹಿತಾಸಕ್ತಿಗಳನ್ನಷ್ಟೆ ಕಾಯುತ್ತವೆ.

**ಮಾನವ ಹಕ್ಕುಗಳು**

ಉಚಿತ ಶಿಕ್ಷಣವನ್ನು ಹೆಣ್ಣು ಮಕ್ಕಳಿಗೆ ನೀಡಬೇಕು. ಅದರಿಂದ ಮಹಿಳೆಯರು ಆತ್ಮವಿಶ್ವಾಸ ಬೆಳೆಸಿಕೊಳ್ಳಬಹುದು.

ತಂದೆ-ತಾಯಿ ಆಸ್ತಿ ಮೇಲೆ ಸಮಾನ ಹಕ್ಕು

ಗಂಡ-ಹೆಂಡತಿಯರು ಜಂಟಿಯಾಗಿ ಪಡೆದುಕೊಂಡ ಯಾವುದೇ ಆಸ್ತಿಯನ್ನು ವಿಚ್ಛೇದನದ ಸಂದರ್ಭದಲ್ಲಿ ಸಮನಾಗಿ ಹಂಚಬೇಕು.

ತಮ್ಮ ದೇಹ ಮತ್ತು ಸಂತಾನೋತ್ಪತ್ತಿಯ ಮೇಲಿನ ಮಹಿಳೆಯರ ಹಕ್ಕನ್ನು ಗುರುತಿಸಬೇಕು.

ಕುಟುಂಬ ನಿಯಂತ್ರಣವು ಗಂಡ-ಹೆಂಡತಿಯರ ಸಮ್ಮಾನ ಜವಾಬ್ದಾರಿಯಾಗಬೇಕು.

ಪಂಚಾಯ್ತಿ ಮತ್ತು ಜಿಲ್ಲಾ ಮಟ್ಟದಲ್ಲಿ ಮಹಿಳಾ ಆಯೋಗದ ವಿಭಾಗವನ್ನು ಸ್ಥಾಪಿಸಬೇಕು. ಅದರಿಂದ ಮಹಿಳೆಯರು ತಮ್ಮ ಹಕ್ಕುಗಳ ಅವಕಾಶ ಪಡೆಯಬಹುದು.

**ಟಿಬೇಟಿನ ಮಹಿಳೆಯರು**

**ಸಭೆಯು -**

1. ದಲೈಲಾಮಾರಿಂದ ಗುರುತಿಸಲ್ಪಟ್ಟ 11ನೇ ಪಂಚೆನ್‌ಲಾಮ ಗೆದಂ ಚೊಯ್‌ಕಿ ನೈಮಾ ಸೇರಿದಂತೆ ಬಂಧಿಸಲ್ಪಟ್ಟಿರುವ ಎಲ್ಲಾ ಮಹಿಳೆಯರನ್ನು ಬಿಡುಗಡೆ ಮಾಡಬೇಕೆಂದು ಚೀನಾ ಸರ್ಕಾರದ ಮೇಲೆ ಒತ್ತಡ ತರಲು ತೀರ್ಮಾನಿಸಿತು.

2. ಟಿಬೇಟಿನ ಮಹಿಳೆಯರು ಗರ್ಭಪಾತ ಮಾಡಿಸಿಕೊಳ್ಳುವಂತೆ, ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವಂತೆ ಬಲಾತ್ಕರಿಸುತ್ತಿರುವ ಚೀನ ಸರ್ಕಾರದ ಮೇಲೆ ಒತ್ತಡ ತರಲು ತೀರ್ಮಾನಿಸಲಾಯ್ತು.

**ಉತ್ತರಕಾಂಡ :**

1. 1977 ಸೆಪ್ಟೆಂಬರ್ 1-2, ಅಕ್ಟೋಬರ್ 2ರಂದು ನಡೆದ ಶಾಂತಿಯುತ ಪ್ರತಿಭಟನೆಯ ಸಮಯದಲ್ಲಿ ನಡೆದ ಪೋಲಿಸ್ ಫಯರಿಂಗ್ ಪ್ರಕರಣದ ಸಿ.ಬಿ.ಐ. ವಿಚಾರಣೆಗೆ ತಡೆಯೊಡ್ಡುತ್ತಿರುವ 14 ಹಿರಿಯ ಅಧಿಕಾರಿಗಳನ್ನು ತಕ್ಷಣವೇ ಉತ್ತರ ಪ್ರದೇಶ ಸರ್ಕಾರವು ಅಮಾನತ್ತುಗೊಳಿಸಬೇಕೆಂದು ಸಭೆಯು ನಿರ್ಣಯಿಸಿತು.

2. ಅತ್ಯಾಚಾರದ ಪ್ರಕರಣಗಳಿಗೆ ಸಂಬಂಧಿಸಿದಂತೆ ಸಮಯ ಮಿತಿ ಇರಬೇಕು.

3. ವಿಚಾರಣೆಯಲ್ಲಿ ಅತಿಯಾದ ವಿಳಂಬ ಮಾಡುವ ಸಿ.ಬಿ.ಐ. ಅನ್ನು ಪ್ರಶ್ನಿಸಬೇಕು. ವಿಳಂಬಕ್ಕೆ ಜವಾಬ್ದಾರರಾದ ಅಧಿಕಾರಿಗಳನ್ನು ಶಿಕ್ಷಿಸಬೇಕು.

**ಕೋಮುವಾದ :**

1. ಕೌಟುಂಬಿಕ ಕೌರ್ಯ ಕುರಿತಂತಾಗಲಿ, ಮಹಿಳೆಯರ ಮೇಲಿನ ದೌರ್ಜನ್ಯ ಕುರಿತಂತಾಗಲಿ, ಅತ್ಯಾಚಾರ ಅಥವಾ ಲೈಂಗಿಕ ಕಿರುಕುಳ ಕುರಿತಂತಾಗಲಿ ನಾವು ಪ್ರತಿಭಟನೆ ನಡೆಸಿದಾಗಲೆಲ್ಲ ನಮ್ಮ ಚಳುವಳಿಯನ್ನು ಬಿ.ಜೆ.ಪಿ, ವಿಶ್ವ ಹಿಂದು ಪರಿಷತ್‌ನಂತಹ ಕೋಮುವಾದಿ ಶಕ್ತಿಗಳು ಹೈ ಜಾಕ್ ಮಾಡಿವೆ. ನಮ್ಮ ವಿಶಯಗಳು ಪಿತೃಪ್ರಧಾನ ಸಮಾಜದಲ್ಲಿನ ಗಂಡು ಹೆಣ್ಣಿನ ನಡುವಿನ ಸಂಬಂಧಗಳನ್ನಾಧರಿಸಿದ್ದು ಮತ್ತು ಅದಕ್ಕೆ ಕೋಮುವಾದಿ ಬಣ್ಣ ಬಳಿಯಲು ಪ್ರಯತ್ನಿಸುವ ಎಲ್ಲರನ್ನು ನಾವು ವಿರೋಧಿಸುತ್ತೇವೆ.

2. ಕೋಮುವಾದವನ್ನು ಪ್ರೋತ್ಸಾಹಿಸುವಲ್ಲಿ ಮಾಧ್ಯಮಗಳ ಪಾತ್ರವನ್ನು ನಾವು ವಿರೋಧಿಸುತ್ತೇವೆ. ಹಾಗೂ ಪತ್ರ ಮತ್ತು ಇತರೆ ನ್ಯಾಯಯುತ ವಿಧಾನಗಳ ಮೂಲಕ ಪತ್ರಿಕೆ, ರಾಜ್ಯ, ಸೆನ್ಸಾರ್ ಮಂಡಳಿಯವರನ್ನು ತಡೆಯಲು ನಿರ್ಣಯಿಸಲಾಯಿತು.

**ಮಾನಸಿಕ ಸ್ವಾಸ್ಥ್ಯ**

1. ಮಾನಸಿಕ/ಭಾವನಾತ್ಮಕ ಆರೋಗ್ಯವು ಮಹಿಳಾ ಚಳುವಳಿಯ ಮುಖ್ಯ ಭಾಗವಾಗಬೇಕು. 2. ಮಕ್ಕಳು, ಆಸ್ತಿಗೆ ಸಂಬಂಧಪಟ್ಟ ಮಾನವ/ನಾಗರಿಕ ಹಕ್ಕುಗಳನ್ನು ಹೊಂದಲು ಮಾನಸಿಕ ಸ್ವಾಸ್ಥ ಕಾನೂನುಗಳು ತಿದ್ದುಪಡಿಯಾಗಬೇಕು. (ಮತ್ತು ತನ್ನ ನಿರ್ಧಾರಗಳನ್ನು ತಾನೆ ಕೈಗೊಳ್ಳುವ ಸ್ವಾತಂತ್ರ್ಯ ಹೊಂದಲು)

**ದಲಿತ ಮಹಿಳೆ**

1. 81ನೇ ತಿದ್ದುಪಡಿಯಲ್ಲಿ ಮೀಸಲಾತಿಯೊಳಗಡೆಯ ವಿಶೇಷ ಮೀಸಲಾತಿಯನ್ನು S.C./S.T./B.C./ಅಲ್ಪಸಂಖ್ಯಾತ ಮಹಿಳೆಯರಿಗೆ ನೀಡಬೇಕು.

2. ಜಾಡಮಾಲಿ ಕೆಲಸವನ್ನು ನಿಷೇಧಿಸಬೇಕು ಮತ್ತು ಆ ಕೆಲಸ ಮಾಡುತ್ತಿದ್ದವರಿಗೆ ಪರಿಹಾರ, ಪುನರ್ವಸತಿ ಕಲ್ಪಿಸಬೇಕು.

3. ದಲಿತ ಸಮುದಾಯಗಳಿಗೆ ವಿಶೇಷ ರಕ್ಷಣೆ ನೀಡಬೇಕು. ದಲಿತರ, ದಲಿತೇತರ ನಡುವಿನ ಒತ್ತಡಗಳ ಸಂದರ್ಭದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಜನಾಂಗದ ಮೇಲಿನ ದೌರ್ಜನ್ಯ ವಿರೋಧಿ ಕಾಯ್ದೆಯನ್ನು ಬಲಪಡಿಸುವುದು.

4. ವಿಳಂಬ ಮಾಡದೆ ಕೃಷಿ ಕಾರ್ಮಿಕರಿಗಾಗಿ ವಿಸ್ತಾರವಾದ ಮಸೂದೆಯನ್ನು ಜಾರಿಗೆ ತರುವುದು.

**ಮಹಿಳೆಯರಿಗೆ ಮೀಸಲಾತಿ**

ಶಿಕ್ಷಣ ಸಂಸ್ಥೆಗಳಲ್ಲಿ, ಉದ್ಯೋಗ, ರಾಜಕೀಯ ಕ್ಷೇತ್ರವಲ್ಲದೆ ಎಲ್ಲಾ ಕ್ಷೇತ್ರಗಳಲ್ಲೂ ಮಹಿಳೆ 33% ಮೀಸಲಾತಿ ನೀಡಬೇಕು.

ದಲಿತ ಮಹಿಳೆಯರಿಗೆ ಮೀಸಲಾತಿ ಇರಬೇಕು.

ಎಲ್ಲಾ ಕ್ಷೇತ್ರಗಳಲ್ಲೂ 33% ಮೀಸಲಾತಿಯನ್ನು ಮಹಿಳೆಯರಿಗೆ ಕಲ್ಪಿಸಲು ಎಲ್ಲಾ ರಾಜಕೀಯ ಅಭ್ಯರ್ಥಿಗಳು ಬದ್ಧರಾಗಬೇಕು.

ಜನವರಿ 26ರಂದು ಫೆಬ್ರವರಿ 4ರವರೆಗೆ ಮೀಸಲಾತಿ ಪ್ರಶ್ನೆ ಕುರಿತಂತೆ ತಮ್ಮ ರಾಜ್ಯಗಳಲ್ಲಿ ಮಹಿಳಾ ಸಂಘಟನೆಗಳು ಕಾರ್ಯಕ್ರಮಗಳನ್ನು ವ್ಯವಸ್ಥಾಪಿಸಬೇಕು.

## ಮಹಿಳೆಯರ ಮೇಲಿನ ಅಪರಾಧಗಳಲ್ಲಿ ಗಂಡ, ಸಂಬಂಧಿಕರೆ ಮುಖ್ಯ ಅಪರಾಧಿಗಳು

1990ರ ದಶಕದಲ್ಲಿ ಗಂಡ ಮತ್ತು ಸಂಬಂಧಿಕರಿಂದ ಮಹಿಳೆಯರ ಮೇಲಾಗುವ ಅಪರಾಧಗಳು ಹೆಚ್ಚಿದೆ ಎಂದು ಅಧ್ಯಯನದ ವರದಿಯೊಂದು ಹೇಳಿದೆ. 1996ರಲ್ಲಿ ಗಂಡ ಮತ್ತು ಸಂಬಂಧಿಗಳಿಂದ ಮಹಿಳೆಯರು ಅನುಭವಿಸಿದ ಕಿರುಕುಳದ ಘಟನೆ ಶೇ. 28.6ರಷ್ಟಿದ್ದು ಅತಿ ಹೆಚ್ಚಿನ ಸಂಖ್ಯೆ ಎಂದು ದಾಖಲಾಗಿದೆ. ಯೋಜನಾ ಆಯೋಗದ ಶ್ರೀ ರಾಜ್‌ಕುಮಾರ್ ಅವರು ನಡೆಸಿದ ಅಧ್ಯಯನದ ಪ್ರಕಾರ ಮಹಿಳೆಯರ ಮೇಲಿನ ಹಿಂಸೆಯು ವರ್ಷಕ್ಕೆ ಶೇ. 14.6ರಷ್ಟು ಹೆಚ್ಚುತ್ತಿದೆ. ಗಂಡ ಮತ್ತು ಸಂಬಂಧಿಕರು ನಡೆಸುವ ಅಪರಾಧದಲ್ಲೊಂದಾದ ಲೈಂಗಿಕ ಕಿರುಕುಳವು 1996ರಲ್ಲಿ ಶೇ. 24.9 ಎಂದು ದಾಖಲಾಗಿದೆ. ಅಪಹರಣದಂತಹ ಪ್ರಕರಣಗಳು ವರ್ಷಕ್ಕೆ 1.7ರಷ್ಟು ಹೆಚ್ಚಾಗುತ್ತಿವೆ. ಅತ್ಯಾಚಾರದ ಸಂಖ್ಯೆ ಶೀಘ್ರವಾಗಿ ಹೆಚ್ಚುತ್ತಿದೆ. 1990-96ರ ಅವಧಿಯಲ್ಲಿ ಅತ್ಯಾಚಾರದ ಪ್ರಕರಣಗಳು 9,518ರಿಂದ 12,661ಕ್ಕೆ ಏರಿದ್ದು ಶೇ. 33ರಷ್ಟು ಹೆಚ್ಚಾಗಿದೆ. ವರ್ಷಕ್ಕೆ ಶೇಕಡ 4.8ರಂತೆ ಅತ್ಯಾಚಾರದ ಪ್ರಕರಣಗಳು ಹೆಚ್ಚುತ್ತಿವೆ. ಲೈಂಗಿಕ ಕಿರುಕುಳ ವರ್ಷಕ್ಕೆ ಶೇ. 5.9ರಷ್ಟು ಹೆಚ್ಚಾಗುತ್ತಿವೆ. ವರದಕ್ಷಿಣೆ ಸಾವಿನ ಸಂಖ್ಯೆ 1991ರಲ್ಲಿ 4,863 ಇದ್ದದ್ದು 1993ರಲ್ಲಿ 5817ಕ್ಕೆ ಏರಿದೆ.

ಅಪರಾಧಗಳು ಶೇ. 14.7 ಉತ್ತರ ಪ್ರದೇಶದಲ್ಲಿ, ಶೇ. 9.9 ರಾಜಸ್ಥಾನದಲ್ಲಿ, ಶೇ. 14.1 ಮಧ್ಯ ಪ್ರದೇಶದಲ್ಲಿ, ಶೇ. 5.8 ಪಶ್ಚಿಮ ಬಂಗಾಳದಲ್ಲಿ, ಶೇ. 14.8 ಮಹಾರಾಷ್ಟ್ರದಲ್ಲಿ, ಶೇ. 8.2 ಆಂಧ್ರ ಪ್ರದೇಶದಲ್ಲಿ, ಶೇ. 5.8 ಕರ್ನಾಟಕದಲ್ಲಿ, ಶೇ. 8.0 ತಮಿಳುನಾಡಿನಲ್ಲಿ ಸಂಭವಿಸಿವೆ ಎಂದು ತಿಳಿದುಬಂದಿದೆ.

ಕೃಪೆ : ಟೈಮ್ಸ್ ಆಫ್ ಇಂಡಿಯಾ

# ದುಡಿಯೋರ ದಿನಾಚರಣೆ - ವರದಿ

'ಮಾನಸ'ದಲ್ಲಿ ಲೈಂಗಿಕ ಕಿರುಕುಳಕ್ಕೆ ಸಂಬಂಧಿಸಿದಂತೆ ಇತ್ತೀಚೆಗೆ ಸುಪ್ರೀಂ ಕೋರ್ಟ್ ನೀಡಿದ ತೀರ್ಪನ್ನು ಕುರಿತ ಕರಪತ್ರವನ್ನು ಹಂಚುವ ಮೂಲಕ ಈ ಬಾರಿಯ ಮೇ ದಿನಾಚರಣೆಯನ್ನು ಆಚರಿಸಲಾಯಿತು. ಮೇ ದಿನಾಚರಣೆಯ ಅಂಗವಾಗಿ 'ದುಡಿಯೋರ ಹೋರಾಟ' ಸಂಘಟನೆಯವರು ಸೈಕಲ್ ರ್‍ಯಾಲಿಯನ್ನು ಏರ್ಪಡಿಸಿದ್ದರು. ಸೈಕಲ್ ರ್‍ಯಾಲಿಯು ಮೈಸೂರು ರಸ್ತೆಯಿಂದ ಪ್ರಾರಂಭವಾಗಿ ವಿಜಯನಗರ, ರಾಜಾಜಿನಗರ, ಮಲ್ಲೇಶ್ವರ, ಯಶವಂತಪುರ, ಶಿವಾಜಿನಗರದ ಮಾರ್ಗವಾಗಿ ಟೌನ್‌ಹಾಲ್‌ನಲ್ಲಿ ಕೊನೆಗೊಂಡಿತು. 'ಮಾನಸ' ದವರನ್ನು ಸೈಕಲ್ ರ್‍ಯಾಲಿ ಭಾಗವಹಿಸಲು ಕರೆಯಲಾಗಿತ್ತು. ರ್‍ಯಾಲಿಯಲ್ಲಿ ಭಾಗವಹಿಸಿ, ಜೊತೆಯಲ್ಲಿ ಸುಪ್ರೀಂಕೋರ್ಟ್ ತೀರ್ಪನ್ನು ಕುರಿತ, ಕರಪತ್ರವನ್ನು ಹಂಚಲು ಮಾನಸ ಸಭೆಯಲ್ಲಿ ನಿರ್ಧರಿಸಲಾಗಿತ್ತು. ಹಾಗೆಯೇ ಮಾನಸ ಸದಸ್ಯರು ರಾಜಾಜಿನಗರದಲ್ಲಿ ರ್‍ಯಾಲಿಯನ್ನು ಸೇರಿಕೊಂಡರು. ರಾಜಾಜಿನಗರ, ಮಲ್ಲೇಶ್ವರ ಸರ್ಕಲ್, ಮಲ್ಲೇಶ್ವರ 18ನೇ ಕ್ರಾಸ್ ಬಸ್ ನಿಲ್ದಾಣದಲ್ಲಿ ಕರಪತ್ರ ಹಂಚಲಾಯಿತು. ದುಡಿಯೋರ ಹೋರಾಟ ಸಂಘಟನೆಯ ಸದಸ್ಯರಿಂದ ರಸ್ತೆ ಬದಿಯ ಮಾತು, ಹಾಡುಗಳ ಕಾರ್ಯಕ್ರಮವಿತ್ತು. ಕರಪತ್ರ ಹಂಚುತ್ತಿದ್ದುದರಿಂದ ತಡವಾಗಿ ಸೈಕಲ್ ರ್‍ಯಾಲಿಯು ಮುಂದೆ ಹೋದ ಕಾರಣ ಹಿಂದೆ ಬೀಳಬೇಕಾಯ್ತು. ರ್‍ಯಾಲಿಯನ್ನು ಸೇರಿಕೊಳ್ಳಲು ಮಾರ್ಗ ತಿಳಿಯದ ಕಾರಣ ಒಂದೆರಡು ಕಡೆ ಕರಪತ್ರವನ್ನು ಹಂಚಿ ಟೌನ್‌ಹಾಲ್ ಬಳಿ ರ್‍ಯಾಲಿ ಕೊನೆಗೊಳ್ಳುವ ವೇಳೆಗೆ ಭಾಗವಹಿಸ ಬಹುದೆಂದು ನಿರ್ಧರಿಸಿ ಕೆಲವೆಡೆ ಕರಪತ್ರ ಹಂಚಲಾಯ್ತು. ಬಸ್ ನಿಲ್ದಾಣಗಳು, ಕೆ.ಸಿ. ಜನರಲ್ ಆಸ್ಪತ್ರೆ, ಟೆಲಿಫೋನ್ ಎಕ್ಸ್‌ಛೇಂಜ್‌ನಲ್ಲಿ ಕರಪತ್ರ ಹಂಚಿ ನಂತರ ಟೌನ್‌ಹಾಲ್‌ಗೆ ಬರಲಾಯ್ತು. ಟೌನ್‌ಹಾಲ್, ರವೀಂದ್ರ ಕಲಾಕ್ಷೇತ್ರದ ಬಳಿ ಕರಪತ್ರ ಹಂಚಲಾಯ್ತು.

ರ್‍ಯಾಲಿ ಬರಲು ಇನ್ನೂ ಸಮಯವಿದ್ದುದರಿಂದ ಟೌನ್‌ಹಾಲ್ ಮೆಟ್ಟಿಲುಗಳ ಮೇಲೆ ಕುಳಿತು ಕಾಯುತ್ತಿದ್ದೇವು. AITUCಯವರ ಬೃಹತ್ ರ್‍ಯಾಲಿಯು ಟೌನ್‌ಹಾಲ್ ಮುಂದೆ ಹೋಯಿತು. ಕೆಂಪು ಬಾವುಟ, ಘೋಷಣೆ, ತಾಳ ತಮಟೆಗಳ ಸದ್ದಿನೊಡನೆ ಹೋಗುತ್ತಿದ್ದ ಬೃಹತ್ ರ್‍ಯಾಲಿಯಲ್ಲಿ ಮಹಿಳೆಯರೆಲ್ಲಿ ಎಂದು ಕಣ್ಣಾಡಿಸುತ್ತಿದ್ದಾಗ 8-10 ಮಹಿಳೆಯರು ಕಂಡರು. ನಂತರ ಬಂದ CITUನವರ ರ್‍ಯಾಲಿಯಲ್ಲೂ ಮಹಿಳೆಯರನ್ನು ಹುಡುಕಬೇಕಾಯ್ತು. ಅಂಕಿ ಅಂಶಗಳ ಪ್ರಕಾರ ಗಂಡಸರಿಗಿಂತ ಹೆಂಗಸರು ಹೆಚ್ಚು ದುಡಿಯುತ್ತಾರೆ. ಆದರೆ ದುಡಿಮೆಗಾರರ ರ್‍ಯಾಲಿಯಲ್ಲಿ ಮಹಿಳೆಯರು ಬೆರಳೆಣಿಕೆಯಷ್ಟೂ ಇಲ್ಲ! ಕಾರಣ ಯೋಚಿಸುತ್ತ ಕುಳಿತಿದ್ದಾಗ ಒಂದರ ಹಿಂದೊಂದು ಸೈಕಲ್‌ಗಳು ಬಂದವು. ಸುಮಾರು 25ರಿಂದ 30. ಹೆಚ್ಚು ಕಡಿಮೆ ಅರ್ಧದಷ್ಟು ಸೈಕಲ್ ಮೇಲೆ ಚೂಡಿದಾರ್ ತೊಟ್ಟುಕೊಂಡಿದ್ದ ಸಣ್ಣ ಹುಡುಗಿಯರನ್ನು ನೋಡಿ ಕೊಂಚ ಸಮಾಧಾನವಾಯ್ತು. ದಿನವಿಡಿ ಸೈಕಲ್ ತುಳಿದು ಸುಸ್ತಾಗಿದ್ದರೂ ಉಳಿದಿದ್ದ ಕೊಂಚ ಶಕ್ತಿಯಲ್ಲೇ ಕಾರ್ಯಕ್ರಮ ಪ್ರಾರಂಭಿಸಿದರು.

ದುಡಿಯೋರ ಹೋರಾಟ ಸಂಘಟನೆಯ ಸದಸ್ಯರು ಮೇ ದಿನಾಚರಣೆ ಕುರಿತ ಕೆಲ ಹಾಡನ್ನು ಹಾಡಿದರು. ರ್‍ಯಾಲಿಯಲ್ಲಿ ಭಾಗವಹಿಸಿದ್ದ ಬೇರೆ ಸಂಘಟನೆಗಳ ಪ್ರತಿನಿಧಿಗಳು ಮಾತನಾಡಿದರು. ದುಡಿಯೋರ ಹೋರಾಟದ ಯುವ ಕಾರ್ಯಕರ್ತರೊಬ್ಬರು ಅವರ ಸಂಘಟನೆಯ ಪರವಾಗಿ ಮಾತನಾಡಿದರು. ನಮ್ ದೇಶ್‌ದಲ್ಲಿ ಕೊಡಕ್ಕೆ ಕೆಲ್ಸ ಇಲ್ಲ, ಆದ್ರೆ ಮೀಸ್ಲಾತಿ ಬಗ್ಗೆ ಮಾತಾಡ್ತರೆ, ಈ ದೇಶದ್ ದಲಿತ್ರು, ರೈತರು ಯಾವಾಗ್ಲು ಊಟ, ಬಟ್ಟೆ, ಉದ್ಯೋಗ ಇಲ್ದೆ ಕಷ್ಟ್‌ಪಡ್ತಾರೆ. ಮಹಿಳೇರು ಅದ್ರಲ್ಲೂ ದಲಿತ ಮಹಿಳೇರು ಜಾಸ್ತಿ ಶೋಷ್ಣೆಗೊಳ್‌ಗಾಗ್ತಾರೆ. ಇದುಕೆಲ್ಲ ಕಾರ್‍ಣ ಏನು? ಯಾರೊ ಕೆಲ್ವೆ ಜನ ಸುಖ್‌ವಾಗ್ ಇರ್‍ತಾರೆ. ಉಳ್ದೋರು ಕಷ್ಟ ಪಡ್ತಾರೆ. ಎಲ್ರೂ ಒಂದಾಗಿ ನಮ್ ಹಕ್ಕಿಗಾಗಿ ಹೋರಾಡ್‌ಬೇಕು ಎಂದು ಸರಳವಾಗಿ ನೇರವಾಗಿ ಮಾತನಾಡಿದ್ದು ಮನಸ್ಸಿಗೆ ಮುಟ್ಟೋ ಹಂಗಿತ್ತು. ಮಹಿಳಾ ಕಾರ್ಮಿಕರನ್ನು ಕುರಿತ ಹಾಡಿನೊಂದಿಗೆ ಸಮಾರಂಭ ಮುಕ್ತಾಯವಾಯಿತು. ವೇದಿಕೆ, ಸ್ವಾಗತ, ಅಧ್ಯಕ್ಷರು, ವಂದನಾರ್ಪಣೆಗಳಿಲ್ಲದೆ ನಿಜ ಅರ್ಥದಲ್ಲಿ ಅದೊಂದು ದುಡಿಯೋರ ಸಮಾರಂಭವಾಗಿತ್ತು.

# ತಾಯಿ ಸಾಹೇಬ - ಒಂದು ಅನಿಸಿಕೆ

'ಎ', 'ತುತ್ತಾ ಮುತ್ತಾ'ಗಳಂತಹ ಸಿನಿಮಾಗಳ ಅಬ್ಬರದ ನಡುವೆ ಗಿರೀಶ ಕಾಸರವಳ್ಳಿಯವರ ತಾಯಿ ಸಾಹೇಬ ಸದ್ದಿಲ್ಲದೆ ಬಂದು ಹೋಗಿಯೂ ಆಯ್ತು. ಈ ಸಿನಿಮಾ ಕೂಡ ಗಿರೀಶರ ಎಲ್ಲಾ ಸಿನಿಮಾಗಳಂತೆ ಗಂಭೀರ, ಸೂಕ್ಷ್ಮ! ಉತ್ತಮ ಚಿತ್ರವೆಂದು ರಾಷ್ಟ್ರೀಯ ಪ್ರಶಸ್ತಿ ಪಡೆದುಕೊಂಡಿದೆ.

ಅಪ್ಪಸಾಹೇಬ ಊರಿನ ಶ್ರೀಮಂತ ಜಮೀನ್ದಾರ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ಮುಳುಗಿದವ. ಅವನಿಗಿಬ್ಬರು ಹೆಂಡತಿಯರು, ಮೊದಲನೇ ಹೆಂಡತಿ ಮಕ್ಕಳಿಲ್ಲದೆ ವ್ರತ ಆಚರಣೆ ಎಂದು ಆಧ್ಯಾತ್ಮಕ್ಕೆ ಹೊರಳಿದವಳು. ಎರಡನೇ ಹೆಂಡತಿ ತಾಯಿ ಸಾಹೇಬ ನಿರಾಸೆ, ಒಂಟಿತನದೊಂದಿಗೆ ವಾಡೆಯೊಳಗುಳಿದವಳು. ಆಕೆಗೂ ಮಕ್ಕಳಿರುವುದಿಲ್ಲ. ಇವರಿಬ್ಬರಿಗೂ ಇಲ್ಲದ ಮಕ್ಕಳ ಭಾಗ್ಯ ಅಪ್ಪ ಸಾಹೇಬ ಇಟ್ಟುಕೊಂಡಿದ್ದ ಚಂದ್ರಿಯದು. ಆಸ್ತಿಗೆ ವಾರಸುದಾರರಿಲ್ಲದ ಕಾರಣ ಸಂಬಂಧಿಕರ ಗಂಡು ಮಗುವನ್ನು ವಿದಿವತ್ತಾಗಿ ದತ್ತು ತೆಗೆದುಕೊಳ್ಳುತ್ತಾರೆ. ಸ್ವಾತಂತ್ರ್ಯ ಬಂದ ನಂತರ ಕೆಲ ಕಾಲ ನಿಷ್ಕ್ರಿಯನಾದ ಅಪ್ಪ ಸಾಹೇಬ ನಂತರ ದೇಸಿಯ ರಾಜರುಗಳ, ಜಮೀನ್ದಾರರೊಡನೆ ನಡೆದ ಹೋರಾಟದಲ್ಲಿ ತೊಡಗಿಸಿಕೊಂಡು ಕೊಲೆಯಾಗುತ್ತಾನೆ. ಮುಂದೆ ದತ್ತು ಮಗ ಚಂದ್ರಿಯ ಮಗಳನ್ನೆ ಪ್ರೀತಿಸುತ್ತಾನೆ. ಅದಕ್ಕೆ ತಾಯಿ ಸಾಹೇಬ ಆಕ್ಷೇಪಿಸಿದರೂ ಮನ ಬದಲಾಯಿಸಿ ಮದುವೆಗೆ ಒಪ್ಪಿಗೆ ನೀಡಿದರೂ ದತ್ತಕ ಕಾನೂನು ತೊಡಕಾಗುತ್ತದೆ. ಆದರೂ ತಾಯಿಸಾಹೇಬ ದತ್ತಕ ಕಾನೂನನ್ನೆ ನಿರಾಧಾರಗೊಳಿಸುವ risk ತೆಗೆದುಕೊಂಡು ಅವರಿಬ್ಬರು ಒಂದಾಗುವಂತೆ ಮಾಡುತ್ತಾಳೆ. ಕಾನೂನು ಮುರಿದಿದ್ದಕ್ಕೆ ಮುಂದಾಗುವ ಅನಾಹುತಗಳಿಗೆ ಸಿದ್ಧಳಾಗಿ ತಾಯಿ ಸಾಹೇಬ ಕೂರುವುದರೊಂದಿಗೆ ಚಿತ್ರ ಕೊನೆಯಾಗುತ್ತದೆ.

ಇಡೀ ಚಿತ್ರ ನಿಧಾನವಾಗಿ ತಣ್ಣಗೆ ಏರಿಳಿತಗಳಿಲ್ಲದೆ ಸಾಗುತ್ತದೆ. ಎಲ್ಲೂ ಏನೂ Break ಅಥವಾ Relief ನೀಡದಿರುವುದು ಬೋರ್ ಹೊಡೆಸುತ್ತದೆ. ಜಯಮಾಲ ಅವರು ಮನೋಜ್ಞವಾಗಿ ಅಭಿನಯಿಸಿದ್ದಾರೆನ್ನುವುದಕ್ಕಿಂತ ತಮ್ಮ ಮಾಮೂಲಿ ಗ್ಲಾಮರ್ ಅಭಿನಯಕ್ಕಿಂತ ಭಿನ್ನವಾಗಿ ನಟಿಸಿದ್ದಾರೆನ್ನಬಹುದು. ಸೂಕ್ಷ್ಮಾತಿಸೂಕ್ಷ್ಮ ವಿವರಣೆಯೊಂದಿಗೆ ಪ್ರತಿ ದೃಶ್ಯವನ್ನೂ ಚಿತ್ರಿಸಿರುವುದು ಚೆನ್ನಾಗಿದೆಯೆನಿಸಿದರೂ ಅದೇ ಸಿನಿಮಾದ - Point ಕೂಡ ಆಗಿದೆಯೇನೊ ಎಂಬ ಭಾವನೆ ಬರುತ್ತದೆ. ಎಣ್ಣೆ ಹಚ್ಚುವ ಸೀನ್‌ನಲ್ಲಿ ಸುಂದರವಾದ ಎಣ್ಣೆಯ ಬಟ್ಟಲೆ ನಮ್ಮ ಗಮನ ಸೆಳೆದು ತಾಯಿ ಸಾಹೇಬಳ ಮುಖದ ಭಾವನೆಗಳನ್ನ ಗಮನಿಸಬೇಕೆನಿಸುವುದಿಲ್ಲ. ಛಾಯಾಗ್ರಣದ ಕಲಾತ್ಮಕತೆಯಿಂದಾಗಿ, ಸುಂದರ Constume ನಿಂದಾಗಿ ತಾಯಿ ಸಾಹೇಬಳ ಒಳಗೆ ನಡೆಯುವ ಸೂಕ್ಷ್ಮ ಸಂಘರ್ಷಗಳು ತಟ್ಟುವುದಿಲ್ಲ ಅಥವಾ ಅವನ್ನೆಲ್ಲ ಅಭಿನಯದಿಂದ ಮೀರಲು ಜಯಮಾಲಾರಿಗೆ ಸಾಧ್ಯವಾಗಿಲ್ಲವಾ?

ತಾಯಿ ಸಾಹೇಬಳ ಪಾತ್ರದಲ್ಲಿನ ಸಂಘರ್ಷವನ್ನೇ ಹೆಚ್ಚು Foucus ಮಾಡಲು ಹೋಗಿ ಇತರೆ ಪಾತ್ರಗಳನ್ನು ತುಂಬಾ ಚೆನ್ನಾಗಿ ನಿವಾರಿಸಿಕೊಂಡಂತಿದೆ. ಕುಟುಂಬದ ಶ್ರೀಮಂತಿಕೆಯನ್ನು ತೊರೆದ ಅಕ್ಕಾ ಸಾಹೇಬ, ದತ್ತಿನಿಂದಾಗಿ ಶ್ರೀಮಂತರ ಮನೆ ಸೇರುವ ಹುಡುಗ, ಇಟ್ಟುಕೊಂಡವಳ ಮಗಳಾಗಿಯೂ ಅಣ್ಣನೆನಿಸಿಕೊಂಡವನ್ನನ್ನು ಪ್ರೀತಿಸುವ ಹುಡುಗಿ - ಇವು ಕೂಡ ಹೆಚ್ಚು ಸಂಘರ್ಷವನ್ನೊಳಗೊಂಡ ಪಾತ್ರಗಳು. ತುಂಬಾ ಚೆನ್ನಾಗಿ ಅವನ್ನು Sideline ಮಾಡಿ ಸರಳರೇಖೆಯಲ್ಲಿರಿಸಿದಂತೆ ಅನಿಸುತ್ತದೆ.

ಒಮ್ಮೆ ಮಾತ್ರ ಗಂಡ ಜೈಲಿನಿಂದ ಬಂದವನು ಸೀದ ಚಂದ್ರಿ ಮನೆಗೆ ಹೋಗಿರುವನೆಂದು ತಿಳಿದು ನಿರಾಶೆಗೊಳ್ಳುವ ತಾಯಿಸಾಹೇಬ ಉಳಿದಂತೆ ಗಂಡನಿಂದ ಯಾವ ನಿರೀಕ್ಷೆಯನ್ನು ಇಟ್ಟುಕೊಳ್ಳದೆ ತಣ್ಣಗಿರುವಳು. ರಾಮಾಯಣ ಓದುತ್ತಾ ಬೇಸರ, ಏಕತಾನತೆಯನ್ನು ನೀಗಿಸಿಕೊಳ್ಳುವ ಆಕೆ ಮುಂದೆ ಮಗುವನ್ನು ದತ್ತು ತೆಗೆದುಕೊಂಡು ಅದರ ಪಾಲನೆಯಲ್ಲೆ ಕಳೆದು, ಆ ಮಗನಿಂದಲೂ ನೋವನನುಭವಿಸಿ ವಾಡೆಯನ್ನು ದಾಟಿ, ಕಾನೂನನ್ನು ಮುರಿಯುವ ದಿಟ್ಟತನ ತೋರುವವರೆಗೂ ತಾಯಿ ಸಾಹೇಬಳ ಸಂಘರ್ಷವನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಗಂಡ ದತ್ತು ತೆಗೆದುಕೊಳ್ಳುವ ನಿರ್ಧಾರ ಕೈಗೊಂಡಿರುವುದು ಗೊತ್ತಾದಾಗ "ಮನ್ಯಾಗಿನ ಹೆಂಗಸರನ್ನು ಒಂದು ಮಾತು ಕೇಳಲಿಲ್ಲ ಅಂತ ಬೇಸರಾಯ್ತು ಎಂದು ನೇರವಾಗಿ ಹೇಳುವ, ಮೊದಲ ಬಾರಿಗೆ ಆಕೆ ಗಂಡನನ್ನು ಹುಡುಕಲು ಚಂದ್ರಿಯೊಡನೆ ದಿಟ್ಟವಾಗಿ ಹೆಜ್ಜೆ ಹಾಕುತ್ತ ವಾಡೆಯಿಂದ ಹೊರ ಬರುವಾಗ ವಾಡೆಯ ಬಾಗಿಲು ವಿಶಾಲವಾಗಿ ತೆರೆದುಕೊಳ್ಳುವ ದೃಶ್ಯಗಳಲ್ಲಿ ಆ ಸೂಕ್ಷ್ಮತೆಯನ್ನು ಕಾಣಬಹುದು.

ಚಂದ್ರಿಯಂತಹ ಹೆಣ್ಣಿನೊಂದಿಗೆ ಹೆಜ್ಜೆ ಹಾಕುತ್ತಾ ವಾಡೆಯ ಬೃಹತ್ ಬಾಗಿಲುಗಳನ್ನು ದಾಟಿ ಸಾರೋಟು, ಕಾರಿನ ವೈಭವವಿಲ್ಲದೆ ಊರಿನ ಓಣಿ ಬೀದಿಯಲ್ಲಿ ನಡೆಯುತ್ತಾ ಬರುವುದು, ಸಾಮಾನ್ಯರಂತೆ ಬಸ್‌ನಲ್ಲಿ ಪಯಣಿಸುವುದು ಬಿಡುಗಡೆ ಪಡೆದ ಗಟ್ಟಿ ಹೆಣ್ಣಿನ ಭಾವನೆಯನ್ನು ನೀಡುತ್ತದೆ. ಆದರೆ ಚಿತ್ರದ ಕೊನೆ ಇದನ್ನು ಹುಸಿಯಾಗಿಸಿದೆ. ಮಗನನ್ನು ಬಿಡುಗಡೆಗೊಳಿಸುವ ತಾಯಿ ಸಾಹೇಬಳಿಗೆ ಉಳಿಯುವುದೇನು? ಕೋಟೆಯಂತ ವಾಡೆಯ ಬಂಧನದಲ್ಲಿ ಜೈಲನ್ನು ನಿರೀಕ್ಷಿಸುತ್ತಾ ಕೂರುತ್ತಾಳೆ. ಜೈಲು ಅಥವಾ ವಾಡೆ ಬಿಡುಗಡೆ ಎಲ್ಲಿ? ಬಂಧನ ಕ್ಕೊಳಗಾಗುವ ನಿರೀಕ್ಷೆಯಲ್ಲಿ ಕೂತ ತಾಯಿಸಾಹೇಬಳ ಸುತ್ತ ಹೊತ್ತಿಕೊಳ್ಳುವ ವಿದ್ಯುತ್ ದೀಪಗಳು ಆಕೆಯ ಬಿಡುಗಡೆಯನ್ನ ಸಂಕೇತಿಸುವ ಬದಲಾಗಿ ಬಂಧನವನ್ನು ವೈಭವೀಕರಿಸಿದಂತಾಗಿ ಬಿಡುತ್ತದೆ.

ಸ್ವಾತಂತ್ರ್ಯ ಹೋರಾಟದ ಸಮಯದ, ನಂತರದಲ್ಲಿ ಆದ ಬದಲಾವಣೆಗಳನ್ನ ಸೂಕ್ಷ್ಮ ವಿವರಣೆಗಳೊಂದಿಗೆ (ದೀಪ, ಪೆಟ್ರೋಮ್ಯಾಕ್ಸ್, ವಿದ್ಯುಚ್ಛಕ್ತಿ, ಸಾರೋಟು, ಕಾರು, ಬಸ್ಸು ಇತ್ಯಾದಿ) ಚಿತ್ರಿಸಿರುವುದು ನಿರ್ದೇಶಕರ Perfection ಮಾಧ್ಯಮದ ಬಗೆಗಿನ Commitment ಅನ್ನ ತೋರಿಸುತ್ತದೆ. ಆ ಎರಡು ಕಾಲಘಟ್ಟದಲ್ಲಿ ತಾಯಿ ಸಾಹೇಬಳ ಒಳಗಿನ ಸಂಘರ್ಷಗಳನ್ನ, ಬದಲಾವಣೆಗಳನ್ನು ಸೂಕ್ಷ್ಮವಾಗಿ ನಿರ್ದೇಶಕರು ಚಿತ್ರಿಸಿದ್ದಾರೆ. ಆದರೆ ವಿದ್ಯುತ್ ಬಲ್ಬ್‌ನ ಪ್ರಖರತೆ ಬಿಡುಗಡೆಯ ಸಂಕೇತವಾಗಿಲ್ಲದಿರುವುದು ನಿರಾಶೆ ಎನಿಸುತ್ತದೆ. ●

---

## ಮೌನವಾಗಿ ಸಹಿಸಬೇಡಿ! ಸಿಡಿದೆದ್ದು ಪ್ರತಿಭಟಿಸಿ! ಕರಪತ್ರ ಆಂದೋಲನ

ಲೈಂಗಿಕ ಕಿರುಕುಳ, ದೌರ್ಜನ್ಯ ಉದ್ಯೋಗಸ್ಥ ಮಹಿಳೆಯರು ಎದುರಿಸುತ್ತಿರುವ ಮುಖ್ಯ ಸಮಸ್ಯೆ. ಸಮಾಜದಲ್ಲಿ ಪುರುಷ ಪ್ರಧಾನತೆ, ಅಧಿಕಾರಶಾಹೀ ಪ್ರಧಾನತೆ, ಉದ್ದಿಮೆಗಳ ಮುಖ್ಯ ಉದ್ದೇಶ ಲಾಭ ಗಳಿಕೆ, ಸ್ತ್ರೀಯರನ್ನು ಸರಕನ್ನಾಗಿಸುವ ವ್ಯವಸ್ಥೆ ಇರುವವರೆಗೂ ಮಹಿಳೆಯರು ದುಡಿಯುವ ಸ್ಥಳ ಸುರಕ್ಷಿತವಲ್ಲ.

ಅನೇಕ ವರ್ಷಗಳಿಂದ ಸಾವಿರಾರು ಮಹಿಳೆಯರು ಲೈಂಗಿಕ ಶೋಷಣೆಯ ವಿರುದ್ಧ ಸಂಘಟಿತರಾಗಿ/ವ್ಯಕ್ತಿಗತರಾಗಿ ಹೋರಾಟ ನಡೆಸಿದ್ದರ ಫಲವಾಗಿ ಸುಪ್ರೀಂಕೋರ್ಟ್ ಆಗಸ್ಟ್ 1997ರಲ್ಲಿ ಮಹತ್ತರವಾದ ತೀರ್ಪನ್ನು ನೀಡಿದೆ. ರಾಜಾಸ್ಥಾನದ ಭವರೀಬಾಯಿ ಮೇಲೆ ನಡೆದ ಅತ್ಯಾಚಾರದ ಹಿನ್ನೆಲೆಯಲ್ಲಿ ಮಹಿಳಾ ಸಂಘಟನೆಗಳು ದುಡಿಯುವ ಮಹಿಳೆಯರಿಗೆ ಸಂವಿಧಾನಾತ್ಮಕ ಮೂಲಭೂತ ಹಕ್ಕುಗಳನ್ನು ಜಾರಿಗೊಳಿಸಬೇಕೆಂಬ ರಿಟ್ ಪೆಟಿಷನ್‌ನನ್ನು ಸುಪ್ರೀಂ ಕೋರ್ಟ್ ಸಮರ್ಥಿಸಿದೆ.

ಪರಿಚ್ಛೇದ 19ರ ಪ್ರಕಾರ ದುಡಿಯುವ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳವನ್ನು ಅಪರಾಧವೆಂದು ನ್ಯಾಯಾಲಯ ಗುರುತಿಸುತ್ತದೆ. ಈ ಅಮಾನುಷ ದೌರ್ಜನ್ಯವನ್ನು ಹತ್ತಿಕ್ಕುವ ಉದ್ದೇಶದಿಂದ ನೀಡಿದ ಈ ತೀರ್ಪು ದುಡಿಯುವ ಮಹಿಳೆಯರಿಗೆ ಆಶಾದಾಯಕವಾಗಿದೆ. ಮಹಿಳೆಯರು ಸುರಕ್ಷಿತ ವಾತಾವರಣದಲ್ಲಿ ದುಡಿಯುವ ಮೂಲಭೂತ ಹಕ್ಕನ್ನು ಈ ತೀರ್ಪು ಎತ್ತಿ ಹಿಡಿಯುತ್ತದೆ.

ಈ ತೀರ್ಪನ್ನು ಪ್ರಚುರ ಗೊಳಿಸುವ, ದುಡಿಯುವ ಪ್ರತಿಯೊಬ್ಬ ಮಹಿಳೆಯರಿಗೆ ಈ ಕುರಿತು ಮಾಹಿತಿಯನ್ನು ನೀಡುವ ಉದ್ದೇಶದಿಂದ ಮಾನಸ ಕರಪತ್ರ ಆಂದೋಲನವನ್ನು ಪ್ರಾರಂಭಿಸಿದೆ. ಈ ಆಂದೋಲನವನ್ನು ಕಾರ್ಮಿಕ ದಿನವಾದ ಮೇ ಒಂದರಂದು ಸಾಂಕೇತಿಕವಾಗಿ ಪ್ರಾರಂಭಿಸಲಾಯಿತು. ದುಡಿಯೋರ ಹೋರಾಟ ಮೇ 1ರಂದು ನಡೆಸಿದ ಸೈಕಲ್ ಜಾಥಾದೊಡನೆ ಮಾನಸ ಈ ಕರಪತ್ರವನ್ನು ಹಂಚುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. 1998ರ ಮೇಯಿಂದ 1999ರ ಮೇ ಕಾರ್ಮಿಕ ದಿನದವರೆಗೆ ಈ ಕರಪತ್ರವನ್ನು ಹಂಚುವ ಯೋಜನೆಯನ್ನು ಮಾನಸ ಹಮ್ಮಿಕೊಂಡಿದೆ.

ಲೈಂಗಿಕ ಕಿರುಕುಳದ ವಿರುದ್ಧ ಸುಪ್ರೀಂ ಕೋರ್ಟ್ ನೀಡಿದ ತೀರ್ಪಿನ ಕೆಲವು ಮುಖ್ಯ ಅಂಶಗಳನ್ನು ಈ ಕರಪತ್ರ ಒಳಗೊಂಡಿದೆ. ಆಸಕ್ತ ಮಹಿಳಾ ಸಂಘಟನೆಗಳು, ಪ್ರಗತಿಪರ ಹಾಗೂ ಕಾರ್ಮಿಕ ಸಂಘಟನೆಗಳು ಈ ಕರಪತ್ರ ಆಂದೋಲನದಲ್ಲಿ ಭಾಗಿಯಾಗಿ ಸುಪ್ರೀಂ ಕೋರ್ಟ್ ನೀಡಿದ ಈ ತೀರ್ಪನ್ನು ಕಾಯಿದೆಯನ್ನಾಗಿಸುವಲ್ಲಿ ಕೈ ಜೋಡಿಸಬೇಕೆಂದು ಕೋರುತ್ತೇವೆ.

- ಮಾನಸ

# ಸುರಕ್ಷಿತ ಪ್ರಯಾಣ - ನಮ್ಮ ಹಕ್ಕು

ಕಳೆದ ವರ್ಷ ಡಿಸೆಂಬರ್ ತಿಂಗಳಿನಲ್ಲಿ ರಾಂಚಿಯಲ್ಲಿ ಮಹಿಳಾ ಚಳುವಳಿಗಳ ರಾಷ್ಟ್ರೀಯ ಸಮಾವೇಶ ನಡೆಯಿತು. ದೆಹಲಿಯ 'ಜಾಗೋರಿ' ಮಹಿಳಾ ಸಂಸ್ಥೆಯ ಸದಸ್ಯೆಯೊಬ್ಬರು ಸಮಾವೇಶದಲ್ಲಿ ಭಾಗವಹಿಸಿ ದೆಹಲಿಗೆ ರೈಲಿನಲ್ಲಿ ಹಿಂತಿರುಗುವಾಗ ಅಲ್ಲಿದ್ದ ಮಿಲಿಟರಿ ಸಿಬ್ಬಂದಿಗಳಿಂದ ಲೈಂಗಿಕ ಹಲ್ಲೆಗೊಳಗಾದರು. ಪ್ರತಿಭಟಿಸಿದಾಗ ಮಿಲಿಟರಿಯವನು ಆಕೆಯ ಕೆನ್ನೆಗೆ ಬಲವಾಗಿ ಥಳಿಸಿದನು. ರೈಲು ಇನ್ನೇನು ನಿಲ್ದಾಣ ಮುಟ್ಟುವ ಸಮಯದಲ್ಲಿ ಘಟನೆ ಜರುಗಿದಾಗ ಆಕೆ ಉಳಿದ ಸ್ನೇಹಿತರೊಂದಿಗೆ ತಕ್ಷಣವೇ ರೈಲ್ವೆ ನಿಲ್ದಾಣದ ಪೋಲೀಸರಿಗೆ ಕಂಪ್ಲೇಂಟ್ ಕೊಟ್ಟರು. ಆ ಘಟನೆ ಕುರಿತು ವಿಚಾರಣೆ ನಡೆಯುತ್ತಿದೆ. ಈ ರೀತಿ ಮಹಿಳೆಯರು ರೈಲಿನಲ್ಲಿ ಸಹ ಪ್ರಯಾಣಿಕರಿಂದ ಕಿರುಕುಳ ಅನುಭವಿಸುವುದು ಸರ್ವೇ ಸಾಮಾನ್ಯವಾಗಿಬಿಟ್ಟಿದೆ. ರೈಲಿನಲ್ಲಿ ಮಹಿಳೆಯರ ಸುರಕ್ಷಿತ ಪ್ರಯಾಣಕ್ಕಾಗಿ ದೆಹಲಿಯ ಮಹಿಳಾ ಸಂಘಟನೆಗಳು ಒಟ್ಟಾಗಿ ಬಂದು ರೈಲ್ವೆ ಆಂದೋಲನವನ್ನು ಪ್ರಾರಂಭಿಸಿದರು. ಆಂದೋಲನದ ಪ್ರಯುಕ್ತ ಕರಪತ್ರ, ಭಿತ್ತಿ ಚಿತ್ರಗಳನ್ನು ಪ್ರಕಟಿಸುವುದರ ಜೊತೆಗೆ ರ್‍ಯಾಲಿಯನ್ನು ನಡೆಸಲಾಯಿತು. ದೆಹಲಿಯ ಜಾಗೋರಿ, ಆಕ್ಷನ್ ಇಂಡಿಯಾ, ಸಬ್ಲಾ ಸಂಘ, ಅಂಕುರ್, ನಿರಂತರ್, ಸಹೇಲಿ, ಶಕ್ತಿಶಾಲಿನಿ ಸಂಘಟನೆಗಳು ಸೇರಿ ಆಂದೋಲನಕ್ಕೆ ಕರೆ ನೀಡಲು ಪ್ರಕಟಿಸಿದ ಕರಪತ್ರದ ವಿವರವನ್ನು ಮಾನಸ ಓದುಗರಿಗಾಗಿ ಪ್ರಕಟಿಸಲಾಗಿದೆ.

## ರೈಲಿನಲ್ಲಿ ಮಹಿಳೆಯರ ಮೇಲೆ ನಡೆಯುವ ಲೈಂಗಿಕ ಹಿಂಸೆ ನಿಲ್ಲಲಿ

* 1993 ಫೆಬ್ರುವರಿಯಲ್ಲಿ, ಟಾಟಾಮುರಿ ಎಕ್ಸ್‌ಪ್ರೆಸ್ ರೈಲಿನಲ್ಲಿ 6 ಜನ ಮಹಿಳಾ ಗೃಹ ಕಾರ್ಮಿಕರ ಮೇಲೆ 7 ಜನ ಆರ್ಮಿ ಸೈನಿಕರು ಅತ್ಯಾಚಾರವೆಸಗಿದರು.
* ಮಾರ್ಚ್ 1996ರಲ್ಲಿ ಬಾಂಬೆಯ ಲೋಕಲ್ ರೈಲಿನಲ್ಲಿ 20 ಜನರ ಗುಂಪು ಮೂರು ಜನ ಕಾಲೇಜು ವಿದ್ಯಾರ್ಥಿಗಳ ಮೇಲೆ ಲೈಂಗಿಕ ಹಲ್ಲೆ ನಡೆಸಿ, ಅಶ್ಲೀಲವಾಗಿ ಬೈದು, ಥಳಿಸಿದ್ದಲ್ಲದೆ ಬೆದರಿಕೆಯೊಡ್ಡಿದರು.
* ಸೆಪ್ಟೆಂಬರ್ 1997ರಲ್ಲಿ ಪಶ್ಚಿಮ್ ಎಕ್ಸ್‌ಪ್ರೆಸ್‌ನಲ್ಲಿ ಸಣ್ಣ ಹುಡುಗಿಯೊಬ್ಬಳು ಮಧ್ಯರಾತ್ರಿಯಲ್ಲಿ ಅವಳ ಬರ್ತ್‌ಗೆ ನುಗ್ಗಿದ ಒಬ್ಬ ಅಪರಿಚಿತನಿಂದ ಲೈಂಗಿಕ ಹಿಂಸೆಗೊಳಗಾದಳು.
* 1997 ನವೆಂಬರ್‌ನಲ್ಲಿ ಹಾತಿಯ ಎಕ್ಸ್‌ಪ್ರೆಸ್‌ನಲ್ಲಿ ಇಬ್ಬರು ಮಹಿಳೆಯರ ಮೇಲೆ 15 ಜನರ ಗುಂಪೊಂದು ಹಲ್ಲೆ ನಡೆಸಿದ್ದಲ್ಲದೆ, ಥಳಿಸಿ ಬೆದರಿಸಿದರು. ಮಹಿಳೆಯರ ಕುಟುಂಬದ ಉಳಿದ ಸದಸ್ಯರನ್ನು ಬೆದರಿಸಿ ಮುಂದಿನ ನಿಲ್ದಾಣ ಬರುವವರೆಗೂ (5 ಗಂಟೆಗಳಿಗೂ ಹೆಚ್ಚು) ಹೆಂಗಸರಿಬ್ಬರನ್ನು ಹಿಂಸಿಸಿದ್ದಾರೆ.
* 1998 ಜನವರಿಯಲ್ಲಿ ಟಾಟಾಮುರಿ ಎಕ್ಸ್‌ಪ್ರೆಸ್‌ನಲ್ಲಿ ಸೈನಿಕನೊಬ್ಬ ಮಹಿಳೆಯೊಬ್ಬಳ ಮೇಲೆ ಲೈಂಗಿಕ ಹಲ್ಲೆ ಎಸಗಿದ್ದಲ್ಲದೆ ಆಕೆಯನ್ನು ಥಳಿಸಿದ್ದ.
* 1998 ಫೆಬ್ರುವರಿಯಲ್ಲಿ ಕರ್ನಾಟಕ ಎಕ್ಸ್‌ಪ್ರೆಸ್‌ನಲ್ಲಿ ಸೈನಿಕನೊಬ್ಬ ಸಣ್ಣ ಹುಡುಗಿಯೊಬ್ಬಳಿಗೆ ಲೈಂಗಿಕ ಕಿರುಕುಳ ನೀಡಿ, ಮುಷ್ಟಿಯಿಂದ ಗುದ್ದಿದ್ದಾನೆ.

ಎಷ್ಟು ಮಹಿಳೆಯರು, ಎಷ್ಟು ಭಾರಿ ಈ ರೀತಿ ಲೈಂಗಿಕ ಹಿಂಸೆ ಅನುಭವಿಸಿದ್ದಾರೆ, ಅಶ್ಲೀಲ ಭಾಷೆ, ವರ್ತನೆ, ಹಾಡು, ಸಂಕೇತಗಳ ಮೂಲಕ ಮಹಿಳೆಯರು ಹಿಂಸೆಗೊಳಗಾಗುತ್ತಾರೆ. ಈ ಹಿಂಸೆಯನ್ನು ಕೊನೆಗಾಣಿಸುವುದು ಪ್ರತಿಯೊಬ್ಬ ಪ್ರಯಾಣಿಕರ ಜವಾಬ್ದಾರಿ. ಸುರಕ್ಷಿತವಾಗಿ ಪ್ರಯಾಣಿಸುವುದು ಮೂಲಭೂತ ಹಕ್ಕು.

ಇಂಡಿಯನ್ ಪೀನಲ್‌ಕೋಡ್ ಮತ್ತು ರೈಲ್ವೆ ಕಾಯ್ದೆ ಪ್ರಕಾರ ಲೈಂಗಿಕ ಹಲ್ಲೆ-ಅಶ್ಲೀಲ ಭಾಷೆ, ಸಂಕೇತ, ಬೈಗುಳ, ನೋಡುವಿಕೆ ಎಲ್ಲವೂ ಶಿಕ್ಷಿಸಲ್ಪಡುವ ಅಪರಾಧಗಳು.

| ಕಾಯ್ದೆ | ಅಪರಾಧ | ಶಿಕ್ಷೆ |
| --- | --- | --- |
| ಇಂಡಿಯನ್ ಪೀನಲ್ ಕೋಡ್ ಸೆಕ್ಷನ್ 354 | ಮಹಿಳೆಯರ ಘನತೆಗೆ ಕುಂದು ತರುವ ಯಾವುದೇ ಹಲ್ಲೆ ಅಥವಾ ಬಲಾತ್ಕಾರ : ಇದು ದೈಹಿಕ, ಲೈಂಗಿಕ, ಮೌಖಿಕ ಹಲ್ಲೆಗಳ-ನ್ನೊಳಗೊಂಡಿದೆ. | 2 ವರ್ಷದವರೆಗೆ ಜೈಲು ಮತ್ತು/ಅಥವಾ ದಂಡ |
| ಇಂಡಿಯನ್ ಪೀನಲ್‌ಕೋಡ್ ಸೆಕ್ಷನ್ ನಂ. 9 | ಮಹಿಳೆಯ ಘನತೆಗೆ ಕುಂದು ತರುವ ಶಬ್ದ, ಸಂಕೇತ ಅಥವಾ ಕ್ರಿಯೆ : ಇದು ಅಶ್ಲೀಲ ಪದಗಳು, ಭಾಷೆ, ತುಚ್ಚ ನೋಟ ಏಕಾಂತಕ್ಕೆ ಭಂಗ ತರುವುದು, ಬೆದರಿಕೆಯ ವಸ್ತುಗಳನ್ನು ತೋರಿಸುವುದನ್ನೊಳಗೊಂಡಿದೆ. | 1 ವರ್ಷದವರೆಗೆ ಜೈಲು ಮತ್ತು ಜೈಲು ಮತ್ತು/ಅಥವಾ ದಂಡ |
| ಇಂಡಿಯನ್ ಪೀನಲ್ ಕೋಡ್‌ನ ಸೆಕ್ಷನ್ 294 | ಅಶ್ಲೀಲ ಕ್ರಿಯೆ ಮತ್ತು ಹಾಡುಗಳು : ಇದು ಅಶ್ಲೀಲ ಕ್ರಿಯೆ, ಹಾಡುಗಳು ಅಥವಾ ಪದಗಳ ಮೂಲಕ ಸಾರ್ವಜನಿಕ ಸ್ಥಳದಲ್ಲಿ ತೊಂದರೆ ಕೊಡುವುದನ್ನೊಳಗೊಂಡಿದೆ. | 3 ತಿಂಗಳ ಜೈಲು ಮತ್ತು/ಅಥವಾ ದಂಡ |
| ರೈಲ್ವೆ ಕಾಯ್ದೆಯ ಸೆಕ್ಷನ್ 145 | ಕುಡಿತ ಅಥವಾ ಉಪದ್ರವ : ಯಾವನೇ ವ್ಯಕ್ತಿ ನಿಲ್ದಾಣದಲ್ಲಾಗಲೀ, ಬೋಗಿಯಲ್ಲಾಗಲಿ ಕುಡಿದು ಉಪದ್ರ ನೀಡುವುದು, ಅಶ್ಲೀಲವಾಗಿ ವರ್ತಿಸುವುದು ಅಶ್ಲೀಲ ಭಾಷೆ, ಬೈಯುವುದು | 6 ತಿಂಗಳು ಜೈಲು ಮತ್ತು/ಅಥವಾ ದಂಡ |
| ರೈಲ್ವೆ ಕಾಯ್ದೆಯ ಸೆಕ್ಷನ್ 162 | ಮಹಿಳೆಯರಿಗೆ ಮೀಸಲಿರಿಸಿದ ಭೋಗಿ ಅಥವಾ ಜಾಗವನ್ನು ಪ್ರವೇಶಿಸುವುದು : ಇದು ಮಹಿಳೆಯರಿಗೆ ಮೀಸಲಿರಿಸಿದ ಬೋಗಿ, ಕಂಪಾರ್ಟ್‌ಮೆಂಟ್, ಬರ್ತ್ ಅಥವಾ ಸೀಟನ್ನು ಪ್ರವೇಶಿಸುವುದು, ಉಳಿದುಕೊಳ್ಳುವುದು. | ಟಿಕೇಟನ್ನು ಹಿಂತೆಗೆದುಕೊಂಡು ರೈಲಿನಿಂದ ಹೊರಗಿಳಿಸುವುದು ಮತ್ತು ಅಥವಾ ದಂಡ |

ಪ್ರತಿಯೊಬ್ಬರು ಈ ಹಲ್ಲೆಯನ್ನು ತಡೆಯಬಹುದು, ನಿಲ್ಲಿಸಬಹುದು..... ಸಹ ಪ್ರಯಾಣಿಕರು ತೆಗೆದುಕೊಳ್ಳುವ ತಕ್ಷಣದ ಕ್ರಮಗಳು ಬಹುಮುಖ್ಯ.

ನೀವು ಹಲ್ಲೆಗೊಳಗಾಗಿದ್ದರೆ ಅಥವಾ ಹಲ್ಲೆಯನ್ನು ನೋಡಿದ್ದರೆ -

ನಿಮ್ಮ ದನಿ ಎತ್ತಿ : ಅವರ ದುರ್ವರ್ತನೆಯನ್ನು ಕೂಡಲೆ ನಿಲ್ಲಿಸಲು ಹೇಳಿ. ಸಂಘಟಿತರಾಗಿ ಹಿಂಸೆಯನ್ನು ತಡೆಯಿರಿ, ನಿಲ್ಲಿಸಿ.

ಟಿ.ಟಿ, ರೈಲ್ವೆ ಸೂಪರಿಂಡೆಂಟ್ ಅಥವಾ ಪೋಲಿಸ್‌ಗಾರ್ಡ್ ಅನ್ನು ಕರೆದು ಅಪರಾಧಿಗಳ ಮೇಲೆ ಕ್ರಮ ಜರುಗಿಸಲು ಒತ್ತಾಯಿಸಿ. ಪರಿಸ್ಥಿತಿಯನ್ನು ಕಡೆಗಣಿಸದಂತೆ ನೋಡಿಕೊಳ್ಳಿ, ನಿಮಗೆ ಸಹಕಾರ ನೀಡುವುದು ಅವರ ಕರ್ತವ್ಯ, ಸಹಕಾರ ನೀಡದಿದ್ದಲ್ಲಿ ಅವರ ಹೆಸರು, ಗುರುತಿನ ಸಂಖ್ಯೆಯನ್ನು ಕೇಳಿ ತಿಳಿದುಕೊಳ್ಳಿ ಮತ್ತು ಕರ್ತವ್ಯ ಚ್ಯುತಿಯಡಿಯಲ್ಲಿ ಅವರ ಮೇಲೆ ಕಂಪ್ಲೇಂಟ್ ಕೊಡುವುದನ್ನು ಮರೆಯಬೇಡಿ.

ಹೊಸತನ್ನು ಶೋಧಿಸುವಂತಾಗಿರಿ : ಒಂದು ಸಂದರ್ಭದಲ್ಲಿ ಪುರುಷನೊಬ್ಬ ಹೆಂಗಸೊಬ್ಬಳನ್ನು ದಿಟ್ಟಿಸಿ ನೋಡುತ್ತಲೇ ಇದ್ದ. ಪದೇ ಪದೇ ಆ ರೀತಿ ನೋಡುವುದನ್ನು ನಿಲ್ಲಿಸೆಂದು ಹೇಳಿದಾಗಲೂ ಕೇಳಲಿಲ್ಲ. ಆಗ ಆಕೆ 'ನೀನೊಬ್ಬ ಕತ್ತೆ' ಎಂದು ರಟ್ಟಿನ ಮೇಲೆ ಬರೆದು ಪಕ್ಕದಲ್ಲಿ ಕಾಣುವಂತೆ ಇಟ್ಟುಕೊಂಡಳು. ಪ್ರತಿ ಬಾರಿ ಅವನು ನೋಡಿದಾಗಲೂ ಆ ಬೋರ್ಡನ್ನು ಓದಲೇ ಬೇಕಾಗುತ್ತಿತ್ತು.

ಅವನ ವರ್ತನೆ ಕುರಿತು ಗಮನ ಸೆಳೆಯುವ ಮೂಲಕ ಮತ್ತು ಸಾರ್ವಜನಿಕವಾಗಿ ಮುಜುಗರ ಉಂಟುಮಾಡುವ ಆ ಮೂಲಕ ಅವನು ನೋಡುವುದನ್ನು ನಿಲ್ಲಿಸುದುದಲ್ಲದೆ, ಎದ್ದು ಜಾಗವನ್ನು ಬದಲಾಯಿಸುವಂತೆ ಮಾಡಲಾಯ್ತು.

**ಚೈನ್ ಎಳೆಯಿರಿ :** ಚೈನ್ ಎಳೆಯುವುದರಿಂದ ಪರಿಸ್ಥಿತಿ ಕುರಿತು ತತ್ ತಕ್ಷಣವೇ ಗಮನ ಸೆಳೆಯಬಹುದು ಮತ್ತು ಇದರಿಂದ ಅಪರಾಧಿ ಹೆದರಿಕೊಳ್ಳುವುದು ಸಾಮಾನ್ಯ. ಹಲ್ಲೆಯು ತುರ್ತು ಪರಿಸ್ಥಿತಿಯಾದ್ದರಿಂದ ಚೈನನ್ನು ಎಳೆಯಬಹುದು.

**ಸರ್ಕಾರಿ ರೈಲ್ವೆ ಪೋಲಿಸ್ ಸದಸ್ಯನನ್ನು ಕರೆಯಿರಿ :** ರೈಲಿನಲ್ಲಿ ಸಂಬಂಧಪಟ್ಟ ಅಧಿಕಾರಿಯಿಂದ ನಿಮಗೆ ಸಹಾಯ ದೊರೆಯದಿದ್ದ ಪಕ್ಷದಲ್ಲಿ, ರೈಲಿನಿಂದಿಳಿದು ಪ್ಲಾಟ್ ಫಾರಂನಲ್ಲಿರುವ ಅಧಿಕಾರಿಯನ್ನು ಹುಡುಕಿರಿ. ಮತ್ತೆ ರೈಲು ಹತ್ತುವವರೆಗೂ ರೈಲನ್ನು ಹೊರಡಿಸಬಾರದೆಂದು ಪೋಲಿಸ್ ಅಧಿಕಾರಿಯನ್ನು ಕೇಳಿ ಅಥವಾ ಟಿಕೇಟ್ ಕೌಂಟರ್‌ಗೆ ಹೋಗಿ ಪ್ರಯಾಣವನ್ನು ತಡೆಗೊಳಿಸುತ್ತಿರುವುದಾಗಿ ತಿಳಿಸಿ. ಹೀಗೆ ಮಾಡುವುದರಿಂದ ನೀವು ಅದೇ ಟಿಕೇಟಿನಲ್ಲಿ ಮತ್ತೊಂದು ರೈಲಿನಲ್ಲಿ ಹೋಗಬಹುದು.

**ಸರ್ಕಾರಿ ರೈಲ್ವೆ ಪೋಲೀಸ್ ಸ್ಟೇಶನ್‌ನಲ್ಲಿ FIR ಫೈಲ್ ಮಾಡಿ (ಪ್ರಥಮ ತನಿಖಾ ವರದಿ)**

ಇದು ಬಹಳ ಮುಖ್ಯವಾದ ಕ್ರಿಯೆ. ಎಲ್ಲಾ ಅಪರಾಧಗಳು ಗಂಭೀರವಾದ್ದರಿಂದ ಅದನ್ನು ವರದಿಯನ್ನಾದರು ಮಾಡುವುದು ಅಗತ್ಯ. ತಕ್ಷಣವೆ ಮಾಡುವುದು ಒಳ್ಳೆಯದಾದರೂ, ಭಯದಿಂದ ಅಥವಾ ಇತರೆ ತೊಂದರೆಗಳಿಂದ ಫೈಲ್ ಮಾಡದಿದ್ದರೆ ಮನೆಗೆ ಹೋಗಿ ಇಡಿ ಘಟನೆ ಕುರಿತು ವಿವರವಾಗಿ ಬರೆಯಿರಿ. ಮರುದಿನ ವಿವರದೊಂದಿಗೆ ಟಿಕೇಟನ್ನು ತೆಗೆದುಕೊಂಡು ಬೆಂಬಲಿಸುವ ಸ್ನೇಹಿತರೊಂದಿಗೆ ಹೋಗಿ FIR ಫೈಲ್ ಮಾಡಿ.

**ದೂರು ಪತ್ರವನ್ನು ಬರೆಯಿರಿ :** ಇದನ್ನು ರೈಲ್ವೆಯ ಸಾರ್ವಜನಿಕರ ಕುಂದು ಕೊರೆತ ವಿಭಾಗದ ನಿರ್ದೇಶಕರಿಗೆ ಬರೆಯಿರಿ (Rm 471, Railway Bhavan, New Delhi - 110 001) ಪತ್ರದಲ್ಲಿ ಏನಾಯಿತೆಂಬುದನ್ನು ವಿವರಿಸಿ ಮತ್ತು FIR ಪ್ರತಿ ಹಾಗು ನಿಮ್ಮ ಟಿಕೇಟ್/ಗಳ ಪ್ರತಿಯನ್ನು ಲಗತ್ತಿಸಿ.

**ನೆನಪಿಡಿ :**

* ಪೋಲಿಸರು FIR ಮತ್ತು ಇತರೆ ದಾಖಲೆಗಳ ಪ್ರತಿಯನ್ನು ನೀಡುವುದನ್ನು ಖಚಿತ ಪಡಿಸಿಕೊಳ್ಳಿ.
* ನಿಮ್ಮ ಟಿಕೇಟುಗಳನ್ನು ಸುರಕ್ಷಿತವಾಗಿಟ್ಟುಕೊಳ್ಳಿ. ಪೋಲಿಸರಿಗೆ ಪ್ರತಿಗಳನ್ನು ಮಾಡಿಸಿಕೊಳ್ಳಲು ಹೇಳಿ ಮೂಲ ಪ್ರತಿಯನ್ನು ನಿಮ್ಮ ರೆಕಾರ್ಡಿನಲ್ಲಿರಿಸಿಕೊಳ್ಳಿ.
* ಅಪರಾಧಿಗಳಿದ್ದ ಸೀಟು/ಬರ್ತ್ ಅನ್ನು ಗುರುತು ಹಾಕಿಕೊಳ್ಳಿ.
* ಹಲ್ಲೆ ನಡೆದ ಸ್ಥಳವನ್ನು ಗುರುತು ಮಾಡಿಕೊಳ್ಳಿ (ಯಾವ ಕಂಪಾರ್ಟ್‌ಮೆಂಟ್, ಫ್ಲಾಟ್ ಫಾರಂ, ರೈಲು ಇತ್ಯಾದಿ).
* ಸಾಕ್ಷಿಧಾರರು ಪೋಲಿಸರ ಬಳಿ ತಮ್ಮ ಹೇಳಿಕೆಯನ್ನು ದಾಖಲುಮಾಡಿಸಬೇಕು ಮತ್ತು ತಮ್ಮ ಟಿಕೇಟುಗಳನ್ನು ಜೋಪಾನ ಮಾಡಿಕೊಳ್ಳಬೇಕು.
* ನಿಯಮಿತವಾಗಿ ದೂರವಾಣಿ ಮೂಲಕ ಪೋಲಿಸರನ್ನು ಸಂಪರ್ಕಿಸಿ ಕ್ರಮ ಕೈಗೊಳ್ಳುತ್ತಿದ್ದಾರೆಂಬುದನ್ನು ಖಚಿತ ಪಡಿಸಿಕೊಳ್ಳಿ.
* ಸ್ಥಳೀಯ ಮಹಿಳಾ ಸಂಘಟನೆಗಳನ್ನು ಸಂಪರ್ಕಿಸಿ ಅವರ ಬೆಂಬಲ ಮತ್ತು ಸಹಾಯವನ್ನು ಕೇಳಿ.
* ನಿಮ್ಮ ರಾಜ್ಯದ ಮಹಿಳಾ ಸೆಲ್ ಅನ್ನು ಸಂಪರ್ಕಿಸಿ. ದೆಹಲಿಯಲ್ಲಿ ದೆಹಲಿ ಮಹಿಳಾ ಪೋಲಿಸರ Helplineನ್ನು 3317004ರಲ್ಲಿ ಪಡೆಯಬಹುದು.
* ನೀವು ವಿದೇಶಿ ಪ್ರಯಾಣಿಕರಾಗಿದ್ದರೆ ಭಾರತದಲ್ಲಿನ ರಾಯಭಾರಿ ಕಛೇರಿಗೆ ತಕ್ಷಣವೆ ವರದಿ ಮಾಡಿ, ನಿಮ್ಮ ದೇಶಕ್ಕೆ ಹಿಂತಿರುಗಿದ ಬಳಿಕ ಭಾರತೀಯ ರಾಯಭಾರಿ ಕಛೇರಿಗೆ ದೂರು ಪತ್ರ ಬರೆಯಿರಿ.

ಏನಾದರು ಮಾಡುವುದು ಬಹುಮುಖ್ಯ.

**ರೈಲುಗಳಲ್ಲಿ ಲೈಂಗಿಕ ಹಿಂಸೆ ನಿಲ್ಲಬೇಕು - ಆ ಕುರಿತು ಕಾರ್ಯೋನ್ಮುಖರಾಗಲು ಕರೆ ನೀಡುತ್ತೇವೆ.**

ಹೆಚ್ಚಿನ ಮಾಹಿತಿ, ಸಹಾಯಕ್ಕಾಗಿ ಕೆಳಗಿನ ವಿಳಾಸಕ್ಕೆ ಬರೆಯಿರಿ ಹಾಗು ನೀವು ಕಂಡಿರುವ, ಅನುಭವಿಸಿರುವ ಆ ರೀತಿಯ ಘಟನೆಗಳ ವಿವರ, ಮಾಹಿತಿಯನ್ನು ನಮಗೆ ಕಳಿಸಿ. ಈ ರೀತಿಯ ಘಟನೆಗಳ ಕುರಿತು ಮಾಹಿತಿಯನ್ನು ತಯಾರಿಸಿ ಹಲ್ಲೆಗಳನ್ನು ಬೆಳಕಿಗೆ ತರುವ ಬಗ್ಗೆ ನಾವು ಕೆಲಸ ಮಾಡುತ್ತಿದ್ದೇವೆ. ಅದಕ್ಕೆ ನಿಮ್ಮ ಸಹಾಯ ಅಗತ್ಯ.

**JAGORI,** C-54, Top Floor, South Extension-11, New Delhi - 110 049

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ.**

*ಸಂ. ಮಂಡಳಿ*

REGD NO. KRNA 271

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067